ಶ್ರೀಶಾನುದಾಸ ಗ್ರನ್ಥಮಾಲಾ-೧೦

ಸ್ತೋತ್ರಶಾಖೆ—೨.

# ಭಗವನ್ಮಂಗಳಾಶಾಸನ ಪ್ರಬಂಧಾವಳಿಃ



ವರಾಹಾಯ ನೃಸಿಂಹಾಯ ವಾಮನಾಯ ಚ ವಿಷ್ಣವೇ।
ಸುದರ್ಶನಾಯ ದೇವೇಭ್ಯಃ ಪಂಚಭ್ಯೋ ವೋಽಸ್ತು ಮಂಗಳಂ॥

ಪಾಡಿದವರು.

ಸಾಹಿತ್ಯರತ್ನಂ ಶ್ರೀ ಉ. ವೇ. ಜಗ್ಗೂ ವೇಂಕಟಾಚಾರ್ಯರು

ಶಾರ್ವರಿ-ಮಕರಾತ್ರಿಂಶಾ
1-2-1961

೮೮ ನೇ ತಿರುನಕ್ಷತ್ರದ
ನೆನಪಿಗೆ

ಬೆಲೆ :
ರೂ.0=30

## ಶ್ರೀಶಾನುದಾಸ ಗ್ರನ್ಥಮಾಲಾ ಮೇಲುಕೋಟೆ

ವಿಶ್ವಸಾಹಿತ್ಯದಲ್ಲಿ ವಿಲಕ್ಷಣಪದವಿಯನ್ನು ಹೊಂದಿರುವ ಆಳ್ವಾರುಗಳ ಸುಂದರವಾದ ಗೀತೆಗಳನ್ನು ಕನ್ನಡಲಿಪಿಯಲ್ಲಿ ಸರಳಾನುವಾದದೊಡನೆ ಪ್ರಕಟಿಸುವ ಉದ್ದೇಶದಿಂದ ಈ ಗ್ರಂಥಮಾಲೆ ೧೯೪೬ರಲ್ಲಿ ಸ್ಥಾಪಿತವಾಯಿತು. ಇದರ ಜತೆಗೆ ನಮ್ಮ ಸನಾತನ ಧರ್ಮದ ಮರ್ಮವನ್ನು ಪುಟ್ಟ ಪ್ರಬಂಧಗಳ ಮೂಲಕ ಪ್ರಚಾರ ಮಾಡಲು ಸಂಕಲ್ಪಿಸಿ ೧೯೪೯ರಲ್ಲಿ ನಾಲ್ಕು ಪ್ರಬಂಧಗಳ ಸಂಗ್ರಹವೊಂದನ್ನು ಪ್ರಕಟಿಸಿತು. ಹೊಸದಾಗಿ ಕಾವ್ಯಶಾಖೆ, ವಿಜ್ಞಾನಶಾಖೆಗಳನ್ನು ಆರಂಭಿಸುವ ಆಶೆಯಿದೆ ಇದು ಕೈಗೂಡುವಂತೆ ನಾಡಿನ ಶ್ರೀಮಂತರೂ ಸಾಹಿತ್ಯ ಧರ್ಮಾಭಿಮಾನಿಗಳೂ ವಿಜ್ಞಾನಪ್ರೇಮಿಗಳೂ ವಿಶೇಷವಾಗಿ ಪ್ರೋತ್ಸಾಹವನ್ನು ನೀಡಬೇಕಾಗಿ ಕೋರಿಕೆ.

**ಅಭಿಮಾನಿಗಳು :** ವರ್ಷಕ್ಕೆ ಮೂರು ರೂಪಾಯಿಗಳನ್ನು ಕೊಡುವವರು.

**ಪೋಷಕರು :** ಐವತ್ತು ರೂಪಾಯಿಗಳನ್ನು ಕೊಡುವ ಆಜೀವ ಸದಸ್ಯರು.

**ಸಂರಕ್ಷಕರು :** ನೂರು ರೂಪಾಯಿಗಳನ್ನು ಕೊಡುವ ಉದಾರಿಗಳು.

### ಪ್ರಕಟಣೆಗಳು

೧. ತಿರುಪ್ಪಾವೈ
೨. ತಿರುಮಾಲೈ
೩. ಧರ್ಮದ ಮರ್ಮ
} - ಪ್ರತಿಗಳು ತೀರಿಹೋಗಿವೆ.

| | | | |
|---|---|---|---|
| ೪. | **ವಿಶ್ವಾನುಸನ್ಧಾನಂ :** ಎರಡನೇ ವಿಸ್ತೃತ ಮುದ್ರಣ (ಅನೇಕ ಉಪಯುಕ್ತಾಂಶ ಸಹಿತ) | ರೂ. ೧ | ೫೦ |
| ೫. | ತಿರುವಾಶಿರಿಯಂ : | ರೂ. ೦ | ೩೮ |
| ೬. | 'ನಾಯಕೀಗೀತೆ' : | ರೂ. ೧ | ೫೦ |
| ೭. | ಭಾರತ ಕೃಷ್ಣ ಮಂಗಳಂ | ರೂ. ೦ | ೧೯ |
| ೮. | ವೈರಮುಡಿ ವೈಭವ | (ಸಿದ್ಧವಾಗುತ್ತಿದೆ.) | |

**ವಿವರಗಳಿಗೆ :** ಅಯ್ಯಂಗಾರ್ ನರಸಿಂಹಾಚಾರ್, ಮೇಲುಕೋಟೆ.

# ಪ್ರವೇಶ

"ಶ್ರೀ ಮದ್ವೇದಮಾರ್ಗೇತ್ಯಾದಿ" ಭಗವದ್ರಾಮಾನುಜ ದರ್ಶನ ಪ್ರವರ್ತಕರೂ ಸಾಹಿತ್ಯರತ್ನಂ ಸಾಂಖ್ಯ ತೀರ್ಥಂ ಯೋಗ ಸಾಹಿತ್ಯಾಲಂಕಾರ ವೇದಾನ್ತ ವಿದ್ವಾಂಸರೂ ಯದ್ವದ್ರಿವಾಸನಿಷ್ಠರೂ ಆದ ಜಗ್ಗೂ ವೇಂಕಟಾ ಚಾರ್ಯರು 1-2-1873 ರಲ್ಲಿ ಮಕರ ಮಾಸದಲ್ಲಿ ಆಶ್ರೇಷಾ ನಕ್ಷತ್ರದ ದಿನ 'ವೇದ ಪಾದಸ್ತವ'ವನ್ನೂ ಶ್ರೀ ಯಾದವಾದ್ರೀಶ್ವರೀ ದೇವಿಯು ಸ್ವಪ್ನದಲ್ಲಿ ನಿಯಮಿಸಿದಂತೆ ಸಂಸ್ಕೃತ ಭಾಷಾಭ್ಯಾಸಿಗಳಿಗೆ ಸುಲಭವಾಗಿ ಛಂದಶ್ಶಾಸ್ತ್ರದ ಪರಿಚಯವಾಗುವಂತೆ 'ವೃತ್ತ ಮುಕ್ತಾ ಸಾರಾವಳೀ' ಎಂಬ ಕೃತಿಯನ್ನೂ ರಚಿಸಿದ ಹಯಗ್ರೀವೋಪಾಸಕರಾದ ಸಾಹಿತ್ಯ ವಿದ್ವಾನ್ ಶ್ರೀ ಜಗ್ಗೂ ಶಿಂಗರೈ ಯಂಗಾರ್ಯರ ಎರಡನೆಯ ಪುತ್ರರಾಗಿ ಹುಟ್ಟಿದರು. ತಂದೆಯವರು ಅಧ್ಯಾ ಪಕರಾಗಿದ್ದ ಯದುಗಿರಿಯ "ವೇದ ವೇದಾನ್ತ ಬೋಧಿನೀ" ಸಂಸ್ಕೃತ ಮಹಾ ಪಾಠಶಾಲೆಯಲ್ಲಿಯೇ ಇವರು ನಾನಾ ಶಾಸ್ತ್ರಗಳನ್ನು ದಿವಂಗತ ಶ್ರೀ ಉ. ವೇ. ಪಂಡಿತರತ್ನಂ ಕುಪ್ಪಣ್ಣಾಸ್ವಾಮಿ ಎಂಬವರ ಬಳಿ ಅಧಿಕರಿಸಿ ಅಧ್ಯಕ್ಷರಾಗಿದ್ದ ಅವರ ಆದೇಶದಂತೆ ಆ ಪಾಠಶಾಲೆಯಲ್ಲಿಯೇ ಅಧ್ಯಾಪಕರಾಗಿ 28-2-1908 ರಿಂದ 23-2-1941 ರ ವರೆಗೆ ಸುಮಾರು ಮೂವತ್ತಮೂರು ವರ್ಷಗಳ ಕಾಲ ಸಂಸ್ಕೃತ ಸಾಹಿತ್ಯ ಮತ್ತು ಶ್ರೀ ರಾಮಾನುಜ ದರ್ಶನಗಳ ಪ್ರವಚನವನ್ನು ಮಾಡಿದರು. ಆಮೇಲೆ ತಮ್ಮ ಮನೆಯಲ್ಲಿಯೇ ಭರತಖಂಡದ ನಾನಾ ಭಾಗಗಳಿಂದ ಬಂದ ಜಿಜ್ಞಾಸುಗಳಿಗೆ ವೇದಾನ್ತ ಕಾಲಕ್ಷೇಪಮಾಡುತ್ತಾ ನಾನಾಪ್ರಬಂಧ ರಚನೆಗಳನ್ನು ಮಾಡುತ್ತಾ 'ವಿಶ್ರಾಂತಿ ಜೀವನ'ದಲ್ಲಿಯೂ ಬಿಡುವಿಲ್ಲದೆ ಭಗವನ್ಮಂಗಲಾಶಾಸನ-ಸಂಪ್ರದಾಯ ಗ್ರಂಥ ಪ್ರವಚನಗಳನ್ನು ಮಾಡುತ್ತಾ ನಿರ್ವಹಿಸುತ್ತಿದ್ದರು. ಇವರಿಗೆ ಸ್ವಾಭಾವಿಕವಾಗಿಯೇ ಇದ್ದ ಕವಿತಾಶಕ್ತಿಯಲ್ಲದೆ ಗ್ರಂಥಪರಿಶೀಲನದಿಂದ ಸಾಹಿತ್ಯಸಂಶೋಧನದಲ್ಲಿ ಆಸಕ್ತಿ ಬೆಳೆದು ಅಭಿವೃದ್ಧವಾಯಿತು;

ಇದರ ಫಲಗಳೇ ಅಖಿಲ ಭಾರತ ವಿದ್ವಾಂಸರ ಮೆಚ್ಚಿಗೆಗೆ ಪಾತ್ರ ವಾಗಿರುವ 'ರಸಗಂಗಾಧರ ಮರ್ಮಪ್ರಕಾಶ ಮರ್ಮೋದ್ಘಾಟನಂ

ಮತ್ತು **ಕುವಲಯಾನಂದ ಚಂದ್ರಿಕಾ ಚಕೋರಃ** ” ಎಂಬ ಅದ್ಭುತ ವಿಮರ್ಶನ ಗ್ರಂಥಗಳು. ಈ ವಿದ್ವಾಂಸರ ಪಾಠ ಪ್ರವಚನಶಕ್ತಿಯು ಅನಿತರ ಸಾಧಾರಣವಾದುದು ; ವಿಷಯ ಗ್ರಹಣ ಶಕ್ತಿಯಂತೆಯೇ ಕಿರಿಯರಿಗೂ ಹಿರಿಯರಿಗೂ ಮನಮುಟ್ಟುವಂತೆ ನಿರೂಪಣಶಕ್ತಿಯೂ ಇವರಿಗೆ ಸಹಜ ವಾಗಿದ್ದಿತು. ಆದುದರಿಂದ ಕಾಲಿದಾಸನು ಹೇಳಿರುವಂತೆ ಇವರು ಶಿಕ್ಷಕರಲ್ಲಿ ಶ್ರೇಷ್ಠರಾದವರೆನ್ನಬಹುದು.

ಬಹಳ ಹಿಂದೆಯೇ ಇವರು ದೇಶಭಕ್ತಿ-ಗುರುಭಕ್ತಿಗಳಿಂದ ಪ್ರೇರಿತರಾಗಿ ಸಂಸ್ಕೃತದಲ್ಲಿ ಸಂಗ್ರಹವಾಗಿ **ಶ್ರೀ ಯಾದವಗಿರಿ ಮಾಹಾತ್ಮ್ಯ**ವನ್ನೂ **ಶ್ರೀ ರಾಮಾನುಜ ವೈಭವ**ವನ್ನೂ ರಚಿಸಿ ಕನ್ನಡ ತಾತ್ಪರ್ಯದೊಡನೆ ಪ್ರಕಟಿಸಿದರು. **ಶ್ರೀ ಯದುಗಿರಿ ನಾರಾಯಣಸ್ತವ**ವನ್ನು ವ್ಯಾಖ್ಯಾನದೊಡನೆ ಶ್ರೀ ಶೈಲಾರ್ಯರ ಇತರ ಸ್ತವಗಳೊಡನೆ ಪ್ರಕಟಿಸಿದರು. ಮತ್ತು ತಮಿಳು ನಾಡಿನ ಹರಿದಾಸರಾದ ಆಳ್ವಾರುಗಳ ವೈಭವವನ್ನು ಸಂಸ್ಕೃತದಲ್ಲಿ ರಚಿಸಿರುವರು ; ನಮ್ಮಾಳ್ವಾರ್‌ರವರ 'ತಿರುವಾಯ್ಮೊಳ್ಳಿ'ಯ ಸಾರ ಸಂಗ್ರಹವನ್ನೂ ಸಂಸ್ಕೃತದಲ್ಲಿ ರಚಿಸಿರುವರು. ಸ್ವಯಂ ಕವಿಗಳಾದರೂ ಶ್ರೀಮತ್ ಪಿಳ್ಳೈಲೋಕಂಜೀಯರ್ ರಚಿಸಿರುವ “**ಶ್ರೀಯತೀನ್ದ್ರ ಪ್ರವಣ ಪ್ರಭಾವಂ**” ಎಂಬ ಸಂಪ್ರದಾಯ ಗ್ರಂಥವನ್ನು ಹೊಸದಾಗಿ ಬರೆಯದೆ ತಮಿಳಿಂದ **ಸಂಸ್ಕೃತ ಭಾಷೆಗೆ ಅನು ವಾದ ಮಾಡಿದರು :** ಈ ಅನುವಾದ ಗ್ರಂಥ ಹಿಂದೀ ಭಾಷೆಗೆ ಪರಿವರ್ತಿತ ವಾಗಿ ಅಖಿಲ ಭಾರತ ವಾಙ್ಮಯದಲ್ಲಿ ಸೇರುವ ಭಾಗ್ಯವನ್ನೂ ಪಡೆಯಿತು. '**ಯುವಚರಿತಂ**' ಎಂಬ ಸಂಸ್ಕೃತ ನಾಟಕವನ್ನೂ '**ಅಲಂಕಾರ ತತ್ವಂ**' ಎಂಬ ಕೃತಿಯನ್ನೂ ಇವರು ಬರೆದಿರುವರು. ಹೊರನಾಡಿನ ವಿದ್ವಾಂಸರ ಪ್ರಶಂಸೆಗೆ ಪಾತ್ರವಾಗಿರುವ ಇವರ “**ಭಾರತ ಕೃಷ್ಣ ಮಂಗಳಂ**” ಎಂಬ ಕೃತಿಯು ಈ ಗ್ರಂಥಮಾಲೆಯಿಂದ ೧೯೫೭ ರಲ್ಲಿ ಗೀತಾ ಜಯನ್ತಿದಿನ ಪ್ರಕಟ ವಾಯಿತು. ಅದರ ಮಾದರಿಯಲ್ಲಿರುವ ಈ ಕವಿವರ್ಯರು '**ಶ್ರೀ ವರಾಹ ಮಂಗಲಂ**' '**ಶ್ರೀ ನೃಸಿಂಹ ಮಂಗಲಂ**' '**ಶ್ರೀ ತ್ರಿವಿಕ್ರಮ ಮಂಗಲಂ**' '**ಶ್ರೀ ವಿಷ್ಣು ಮಂಗಲಂ**' ಮತ್ತು '**ಶ್ರೀ ಸುದರ್ಶನ ಮಂಗಲಂ**' ಎಂಬ **ಮಂಗಲಾಶಾಸನ ಕೃತಿ**ಗಳನ್ನು ಈ ಕಿರಿಯ ಪುಸ್ತಕದಲ್ಲಿ ಪ್ರಕಟಿಸಿದೆ.

ಇದನ್ನು ಕನ್ನಡ ನಾಡಿನ ಜನರು ಆದರಿಸಿ ಸ್ವಾಗತಿಸುವರೆಂದು ನಂಬುತ್ತೇನೆ.

ಈ ಕೃತಿಗಳನ್ನು ಆಮೂಲಾಗ್ರವಾಗಿ ಆಸಕ್ತಿಯಿಂದ ಕೇಳಿ ಪರಿಷ್ಕರಿಸಿ ಕೊಟ್ಟ ಶ್ರೀ ಕಾಂಚೀವಾಸೀ ಶ್ರೀ. ಉ. ವೇ. ಮಹಾವಿದ್ವಾಂಸರಾದ ಪ್ರತಿವಾದಿ ಭಯಂಕರ ಅಣ್ಣಂಗರಾಚಾರ್ಯ ಸ್ವಾಮಿಗಳ ಉಪಕಾರ ಚಿರಸ್ಮರಣೀಯವಾದುದು ; ಗ್ರಂಥಮಾಲೆಯ ಪರವಾಗಿ ಸತ್ಸಂಪ್ರದಾಯ ಗ್ರಂಥಮಾಲಾ ಪ್ರಕಾಶನ ಪರಾಯಣರಾದ ಈ ವಿದ್ವದ್ವರರಿಗೆ ಕೃತಜ್ಞತೆಯ ಅನೇಕ ಧನ್ಯವಾದಗಳನ್ನೂ ಪ್ರಣಾಮಗಳನ್ನೂ ಸಮರ್ಪಿಸುತ್ತೇನೆ. ಮುದ್ರಣಕ್ಕೆ ಪ್ರತಿಗಳನ್ನು ಒದಗಿಸಿದ ಶ್ರೀ ಉ. ವೇ. ಗೆಳೆಯ ವಿದ್ವಾನ್ ಜಗ್ಗೂ ಸುದರ್ಶನಾಚಾರ್ಯರಿಗೂ ಧನ್ಯವಾದಗಳನ್ನರ್ಪಿಸುತ್ತೇನೆ.

ಕವಿಗಳು ನಮ್ಮ ನಡುವೇ ಇದ್ದಾಗಲೇ ಈ ಕೃತಿಗಳು ಪ್ರಕಟವಾಗಬೇಕಾಗಿದ್ದಿತು. 'ಸಾಹಿತ್ಯರತ್ನಂ' 'ಶಾಸ್ತ್ರಕವಿ ರತ್ನಂ 'ಎಂದು ಮೊದಲಾಗಿ ನಮ್ಮ ಶ್ರೀಮನ್ ಮಹಾರಾಜರಿಂದಲೂ ಗುರುಪೀಠದಿಂದಲೂ ಸನ್ಮಾನಿತರಾದ ಶ್ರೀ ಉವೇ ಜಗ್ಗೂ ವೇಂಕಟಾಚಾರ್ಯ ಸ್ವಾಮಿಗಳು **ಶಾರ್ವರಿ ಸಂವತ್ಸರದ ಗೋಕುಲಾಷ್ಟಮಿಯ ದಿನ** (14-8-1960) ರಾತ್ರಿ ಆಚಾರ್ಯರ ಪಾದಮೂಲವನ್ನು ಸೇರಿದರು.

ಇವರ ಸಂಗ್ರಹವಾದ ಜೀವನಚರಿತೆ, ಕೃತಿಗಳ ಪರಿಚಯ ಮತ್ತು ಕೆಲವು ಕೃತಿಗಳನ್ನು ದಿವಂಗತರ ತಿರುವಧ್ಯಯನೋತ್ಸವ ಕಾಲದಲ್ಲಿ(ಪ್ಲವ)ಸಂವತ್ಸರದ ವಸಂತ ಕಾಲದಲ್ಲಿ ಸಂಗ್ರಹಿಸಿ ಪ್ರಕಟಿಸಲು ಶ್ರೀಮದಾಚಾರ್ಯರ ಬಂಧು ಮಿತ್ರ ಶಿಷ್ಯವರ್ಗದವರು ನಿಶ್ಚಯಿಸಿದಾರೆ. ಈ ಗ್ರಂಥದಲ್ಲಿ ಸಂಸ್ಕೃತ, ಹಿಂದೀ, ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಆಚಾರ್ಯರ ಮಿತ್ರರಿಂದಲೂ ಶಿಷ್ಯರಿಂದಲೂ ಅಭಿಮಾನಿಗಳಿಂದಲೂ ಬರೆಯಲ್ಪಟ್ಟ ನಿಬಂಧನೆಗಳಿರುವುವು ; **ಶ್ರೀ ಯತಿರಾಜ ಮಂಗಲಂ** ಎಂಬ ಕೃತಿಯೂ ಪ್ರಕಟವಾಗುವುದು ; ಅದು ಒಂದು ಅಂದವಾದ ಸಚಿತ್ರ ಸ್ಮಾರಕ ಗ್ರಂಥವಾಗಿ ಹೊರ ಬೀಳುವುದು.

ದಿವಂಗತರ ಹೆಸರಿನಲ್ಲಿ ಬಹುಕಾಲ ಮೇಲುಕೋಟೆ ಸಂಸ್ಕೃತ ಮಹಾಪಾಠಶಾಲೆಯಲ್ಲಿ ಸಂಸ್ಕೃತ ಸಾಹಿತ್ಯ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗುವ ವಿದ್ಯಾರ್ಥಿಗಳಿಗೆ ಒಂದು ಬಹುಮಾನವನ್ನು ಕೊಡುವಂತೆ

ನಿಧಿಯನ್ನು ಕಲ್ಪಿಸಬೇಕಾಗಿದೆ; ಯದುಗಿರಿಯಲ್ಲಿ ಪ್ರತಿವರ್ಷವೂ ಭಗವದ್ ರಾಮಾನುಜಾಚಾರ್ಯರ ಅವತಾರ ಮಹೋತ್ಸವ ಕಾಲದಲ್ಲಿ ಜರುಗುವ ಶ್ರೀ ಮದುಭಯ ವೇದಾನ್ತ ಪ್ರವರ್ತನ ಸಭೆಯು ನಡೆಯಿಸುವ ಪರೀಕ್ಷೆಗಳಲ್ಲಿ "ಶ್ರೀ ಭಾಷ್ಯ" ವೇದಾನ್ತ ವಿದ್ಯಾಭಾಗದಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗುವವರಿಗೆ ಪ್ರತಿವರ್ಷವೂ ಒಂದು ಬಹುಮಾನವನ್ನು ಈ ಭಕ್ತರ ಅಂಕಿತದಲ್ಲಿ ಕಲ್ಪಿಸುವಂತೆ ನಿಧಿಯನ್ನು ಕಲ್ಪಿಸುವ ಮನೋರಥವಿದೆ.

'ಜ್ಞಾನ ಮಂಟಪ'ವಾದ ಶ್ರೀ ಯಾದವಗಿರಿ ಕ್ಷೇತ್ರದಲ್ಲಿ ಸುಮಾರು ಐವತ್ತು ವರ್ಷಗಳಿಗಿಂತಲೂ ಹೆಚ್ಚಾಗಿ ಸಂಸ್ಕೃತ ಸಾಹಿತ್ಯದ ಸೇವೆಯನ್ನೂ ಶ್ರೀ ರಾಮಾನುಜ ದರ್ಶನ ಪ್ರವರ್ತನವನ್ನೂ ಮಾಡಿ ಕೃತಕೃತ್ಯರಾದ ಶ್ರೀ ಉವೇ ಸಾಹಿತ್ಯ ರತ್ನಂ ಜಗ್ಗೂ ವೆಂಕಟಾಚಾರ್ಯಸ್ವಾಮಿಗಳವರ ಬಂಧುಮಿತ್ರರೂ ಶಿಷ್ಯರೂ ಅಭಿಮಾನಿಗಳೂ ಉದಾರವಾಗಿ ಸ್ವಹಸ್ತ ಪರಹಸ್ತಗಳಿಂದ ಶ್ರೀ ಜಗ್ಗೂ ವೇಂಕಟಾಚಾರ್ಯ ಸ್ಮಾರಕ ಗ್ರಂಥ ಪ್ರಕಟಣೆ ಮತ್ತು ಪಾರಿತೋಷಿಕಗಳಿಗೆ ದಾನಮಾಡಿ ಯಶೋಭಾಗಿಗಳಾಗಬೇಕಾಗಿ ಪ್ರಾರ್ಥನೆ.

ಇವುಗಳಿಗೆ ಸಹಾಯ ಮಾಡುವವರ ಹೆಸರನ್ನು ಸಹಾಯ ದ್ರವ್ಯವನ್ನೂ ಸ್ಮಾರಕ ಗ್ರಂಥದಲ್ಲಿ ಪ್ರಕಟಿಸಲಾಗುವುದು.

ಸಂಸ್ಕೃತ ಸಾಹಿತ್ಯ ಮತ್ತು ಧರ್ಮಪ್ರೇಮಿಗಳೆಲ್ಲರೂ ಧಾರಾಳವಾಗಿ ನಮ್ಮ ಉದ್ಯಮಗಳಿಗೆ ಬೆಂಬಲವಿತ್ತು ಪ್ರೋತ್ಸಾಹಿಸಬೇಕಾಗಿ ಮತ್ತೊಮ್ಮೆ ಪ್ರಾರ್ಥನೆ ಮಾಡುತ್ತೇನೆ.

'ಲಕ್ಷ್ಮೀವಿಲಾಸ'
2-1-454
ನಲ್ಲಕುಂಟಾ ಪೋಸ್ಟ್,
ಯೂನಿವರ್ಸಿಟಿ ರಸ್ತೆ,
ಹೈದರಾಬಾದ್-20 ದಕ್ಷಿಣ.
1-2-1961.

ಆ. ನ. ಶ್ರೀನಿವಾಸೈಯಂಗಾರ್
ಗೌರವ ಸಂಪಾದಕ,
ಶ್ರೀ ಶಾಸುದಾಸ ಗ್ರನ್ಥಮಾಲಾ.

# ಶ್ರೀ ವರಾಹಾದಿ ಮಂಗಲಂ

ಹಾಡಿದವರು: ಶ್ರೀ ಸಾಹಿತ್ಯರತ್ನಂ ಜಗ್ಗೂ ವೇಂಕಟಾಚಾರ್ಯರ್‌ರವರು.
ಅನುವಾದಕರು: ಶ್ರೀ ಅ. ನ. ಶ್ರೀನಿವಾಸೈಯಂಗಾರ್ಯರ್‌ರವರು.

ಶ್ರೀಮತೇ ಹಯಗ್ರೀವಾಯ ನಮಃ
ಶ್ರೀಮತೇ ರಾಮಾನುಜಾಯ ನಮಃ

## ಶ್ರೀ ವರಾಹ ಮಂಗಲಂ

**ಜಲಪಂಕಭಿಯಾ ಹೀನಂ ವಾರಾಹಂ ಬಿಭ್ರತೇ ವಪುಃ।**
**ಉದ್ಧರ್ತುಂ ಪೃಥಿವೀಂ ಮಗ್ನಾಮನವಗಾಥಾಯ ಮಂಗಲಂ ॥ ೧ ॥**

ಹಿರಣ್ಯಾಕ್ಷನು ಭೂಮಿಯನ್ನು ಪೀಡಿಸಿದಾಗ ಕೆಸರುನೀರಿನಲ್ಲಿ ಮುಳುಗಿ ಪಾಚಿಗಟ್ಟಿದ ಭೂದೇವಿಯನ್ನು ಮೇಲಕ್ಕೆತ್ತಲು ಹಿಂತೆಗೆಯದೆ ಹೀನವಾದ ವರಾಹ (ಹಂದಿ) ರೂಪವನ್ನು ಧರಿಸಿದಂತೆ ಸಂಸಾರ ಸಾಗರದಲ್ಲಿ ಮುಳುಗಿದ ಜನರನ್ನು ಉದ್ಧಾರಮಾಡುವುದರ ಸೂಚನೆಯಾಗಿ ಪ್ರಳಯಕಾಲದಲ್ಲಿ ಮುಳುಗಿದ ಪರಮ ಪುರುಷನಿಗೆ ಮಂಗಳವಾಗಲಿ.

**ವೇದಾಂಗಸಂಭೃತಾಂಗಾಯ ಸರ್ವವೇದ ತನೂಭೃತೇ ।**
**ಸಾಮ ಘುರ್ಘುರ ಘೋಷಾಯ ಶ್ರೀ ವರಾಹಾಯ ಮಂಗಲಂ॥೨॥**

ವೇದಾಂಗಮಯವಾದ ಅವಯವಗಳಿಂದ ಶೋಭಿಸುವ, ಸಮಸ್ತ ವೇದಾತ್ಮಕವಾದ, ದಿವ್ಯ ದೇಹವನ್ನು ಧರಿಸಿರುವ, 'ಘುರ್ಘುರ'ವೆಂಬ ಸಾಮ ಘೋಷವನ್ನು ಮಾಡುವ ಶ್ರೀ ವರಾಹಮೂರ್ತಿಗೆ ಮಂಗಳವು!

**ಕೃತ್ಸ್ನಂಗ ಪೂರಿತಾಂಗಾಯ ಸರ್ವಕ್ರತು ಶರೀರಿಣೇ ।**
**ಉದ್ಗೀಥರಾವಿಣೇತುಭ್ಯಂ ಭೂವರಾಹಾಯ ಮಂಗಲಂ ॥ ೩ ॥**

ಯಜ್ಞಾಂಗಮಯವಾದ ಅವಯವಗಳುಳ್ಳ, ಸಕಲ ಯಜ್ಞಮಯವಾದ ಶರೀರದಿಂದ ಕೂಡಿದ, "ಉದ್ಗೀಥ" ಗಾನಮಾಡುವ "ಭೂವರಾಹ ಮೂರ್ತಿಗೆ" ಮಂಗಳವು!

**ಉದ್ಧೃತ್ಯ ಭೂಮಿಂ ಪಾತಾಳಾದುರಸ್ಯಾಲಿಂಗ್ಯ ಜಿಘ್ರತೇ ।**
**ಮೂರ್ಧ್ನಿ ತಾಂ ಪ್ರೀಣತೇ ಭೂಯೋನ್ಮಹಾಕ್ರೋಡಾಯ ಮಂಗಲಂ ॥ ೪ ॥**

ಪಾತಾಳದಿಂದ ಭೂಮಿದೇವಿಯನ್ನು ಮೇಲಕ್ಕೆತ್ತಿ ಎದೆಯಿಂದ "ತಬ್ಬಿಕೊಂಡು" ಮೂಸಿ ನೋಡುತ್ತಿರುವ ಮತ್ತು ತಲೆಯನ್ನು ನೇವರಿಸುತ್ತಾ ಆಕೆಯನ್ನು ಸಂತೋಷಪಡಿಸುತ್ತಿರುವ "ಮಹಾವರಾಹ"ನಿಗೆ ಮಂಗಳವಾಗಲಿ !

ಕುಕ್ಷಿಸ್ರವಲ್ಲಯಾಂಬೋಧಿ ಜಲೇನ ವಿಧುತೇನ ತಾ |
ಪುನಾನಾಯ ಜನೋಲೋಕಮುನೀನ್ ಕ್ರೋಡಾಯ
ಮಂಗಲಂ || ೩ ||

ಉದರದಿಂದ ಒಸರುವ ಪ್ರಳಯಾರ್ಣವದ ನೀರನ್ನು ಚಿಮುಕಿಸಿ ಜನೋಲೋಕದ ಮುನಿಗಳನ್ನು ಪಾವನಗೊಳಿಸಿದ ಕ್ರೋಡಾವರಾಹ ರೂಪಿಗೆ ಮಂಗಳವು !

ರೋಮಾಂತರಗತೈಃ ಬ್ರಹ್ಮಸುತೈಸ್ಸನಕಪೂರ್ವಕೈಃ |
ಸ್ತುತಾಯ ಶ್ರುತಿಸೂಕ್ತೈಸ್ತೇ ಭೂವರಾಹಾಯ ಮಂಗಲಂ
|| ೬ ||

ಕೂದಲೊಳಗೆ ಅಡಗಿದ್ದ ಸನಕಾದಿ ಬ್ರಹ್ಮಪುತ್ರರಿಂದ ಶ್ರುತಿ ಸೂಕ್ತಗಳಿಂದ ಸನ್ನುತನಾದ ಭೂವರಾಹಮೂರ್ತಿಯೇ, ನಿನಗೆ ಮಂಗಳವಾಗಲಿ.

ಘೂತ್ಕಾರೋಹ್ಯಲ್ಲಯಾಂಬೋಧಿ ಜಲಕ್ಲಿನ್ನಾಂಡ ಭಿತ್ತಯೇ |
ಮಹಾದಿವ್ಯವರಾಹಾಯ ಭೂಯಾತ್ಸತತಮಂಗಲಂ || ೭ ||

ಘೂತ್ಕಾರ ಮಾಡುತ್ತಾ ಪ್ರಳಯ ಸಾಗರ ಜಲದಿಂದ ತೋಯ್ದು ಅಂಡ ಭಿತ್ತಿಯನ್ನೂ ಮೇಲಕ್ಕೆತ್ತಿದ ಮಹಾದಿವ್ಯವರಾಹ ರೂಪವನ್ನು ಧರಿಸಿದವನಿಗೆ ಸದಾ ಮಂಗಳವಾಗಲಿ !

ಅಂಡಭಿತ್ತೇಸ್ಸಮುತ್ಥಾಯ ತಥಾ ಪ್ರಳಯವಾರಿಧೇಃ |
ದಂಷ್ಟ್ರಯಾ ಬಿಭ್ರತೇ ಪೃಥ್ವೀಂ ಸ್ವಾತ್ಮಾಧಾರಾಯ ಮಂಗಲಂ
|| ೮ ||

ಅಂಡ ಭಿತ್ತಿಯಿಂದಲೂ ಪ್ರಳಯಾರ್ಣವದಿಂದಲೂ ತನ್ನ (ಕೋರೆ ಹಲ್ಲಿನಿಂದ ಭೂಮಿಯನ್ನು ಮೇಲಕ್ಕೆತ್ತಿ ಧರಿಸಿದ ತನ್ನ ಪ್ರಾಣ ಸಮಾನರಾದ ಭಕ್ತರಿಗೆ ಮತ್ತು ಜ್ಞಾನಿಗಳಿಗೆ ಆಧಾರವಾಗಿ ಇರುವವನಿಗೆ ಮಂಗಳವಾಗಲಿ !

ಲಯಾಂಬೋಧೇರ್ಯಥಾ ಪೃಥ್ವೀಂ
ಭವಾಂಭೋಧೇಸ್ತ್ರಥೈವ ಮಾಂ |
ಸಮುದ್ಧರ್ತೇ ದಯಾಂಬೋಧೇ !
ತೇ ವರಾಹಾಯ ಮಂಗಲಂ ‖ ೯ ‖

ಪ್ರಳಯ ಸಾಗರದಿಂದ ಭೂಮಿಯನ್ನು ಉದ್ಧರಿಸಿದಂತೆ ಸಂಸಾರ ಸಾಗರದಿಂದ ನನ್ನನ್ನು ಉದ್ಧರಿಸುವ ದಯಾಸಾಗರನೇ, ವರಾಹಮೂರ್ತಿಯೇ, ನಿನಗೆ ಮಂಗಳವಾಗಲಿ !

ರಕ್ಷಿತ್ರೇ ನಿರಪೇಕ್ಷಾಣಾಮಪಿ ಕಾರುಣ್ಯಮೂರ್ತಯೇ |
ಹಿರಣ್ಯಾಕ್ಷ ನಿಹನ್ತ್ರೇ ಸ್ಯಾದ್ಭೂವರಾಹಾಯ ಮಂಗಲಂ ‖೧೦‖

"ರಕ್ಷಿಸು" ಎಂದು ಬಯಸಿ ಬೇಡದವರನ್ನೂ ಕೂಡ ಸಲಹುವ ಕರುಣಾ ಮೂರ್ತಿಗೆ, ಭಕ್ತೆಯಾದ ಭೂದೇವಿಯನ್ನು ಕಾಡಿದ ಹಿರಣ್ಯಾಕ್ಷ ಮಹಾ ಸುರನನ್ನು ಕೊಂದ, ಭೂವರಾಹ ಮೂರ್ತಿಗೆ ಮಂಗಳವಾಗಲಿ !

ಸಕೃತ್‌ಸ್ಮರಣ ಮಾತ್ರೇಣ ನರ ಮನ್ತೇ ನಿನೀಷಿತೇ |
ಸ್ಮೃತ್ವಾ ಗತಿಂ ಪರಮಿಕಾಂ ಭೂವರಾಹಾಯ ಮಂಗಲಂ
‖ ೧೧ ‖

ಅವತಾರಿಕೆ :—"ವರಾಹ ಚರಮ ಶ್ಲೋಕದಲ್ಲಿ ಭಗವಂತನು ಭೂ ದೇವಿಗೆ ಹೀಗೆ ಮಾತು ಕೊಟ್ಟಿರುವನು :—

"ದೇಹವೂ ಮನವೂ ಸ್ವಸ್ಥವಾಗಿರುವಾಗ (ಚೆನ್ನಾಗಿರುವ ಕಾಲದಲ್ಲಿ) ಯಾವ ಮನುಷ್ಯನು ವಿಶ್ವರೂಪಿಯಾದ, ಜನ್ಮಾದಿರಹಿತನಾದ ನನ್ನನ್ನು ಸ್ಮರಿಸುವನೋ ಆ ನನ್ನ ಭಕ್ತನನ್ನು ಅವನ ಕೊನೆಗಾಲದಲ್ಲಿ ನೆನೆಯುವೆನು : ಏಕೆಂದರೆ, ಮರಣ ಕಾಲದಲ್ಲಿ ಅವನು ಕಲ್ಲು ಮರಗಳಂತೆ ನಿಶ್ಚೇಷ್ಟಿತನಾಗಿರು ವನು ; ಪ್ರಾಣ ಹೋಗುವ ಕಾಲದಲ್ಲಿ ಬಹಳ ಸಂಕಟವಾಗುವುದರಿಂದ ನನ್ನ ಸ್ಮರಣ ಕೀರ್ತನ ನಾಮಸ್ಮರಣಗಳಿಗೆ ಅವನಿಗೆ ಅವಕಾಶವಾಗಲಾರದು. ಅಂತಹ ಆಪತ್ಕಾಲದಲ್ಲಿ ಅವನನ್ನು ನೆನೆದು ಅವನಿಗೆ ಪರಮ ಪದವನ್ನು ಅನುಗ್ರಹಿಸು ವೆನು." ಈ ಮಂತ್ರವು "ಅಗ್ನೇನಯ" ಎಂಬ ಉಪನಿಷತ್ ಪ್ರಾರ್ಥನೆಗೆ ಭಗವಂತನ ಉತ್ತರವೆಂದು ಸಂಪ್ರದಾಯಜ್ಞರು ಹೇಳುವರು. "ಭುವನ

ಮಂಗಳ" ವಾದ ಈ ಶ್ಲೋಕಗಳೆರಡನ್ನು ಯದುಗಿರಿ (ಮೇಲುಕೋಟೆ) ಯ ಕಲ್ಯಾಣ ಸರಸ್ಸಿನ ಪೂರ್ವತೀರದಲ್ಲಿ ವರಾಹ ರೂಪಿಯಾದ ಭಗವಂತನು ಮಹೀದೇವಿಗೆ ಉಪದೇಶಿಸಿದ ವೃತ್ತಾಂತವು ಶ್ರೀಮದ್ಯಾದವಗಿರಿ ಮಾಹಾತ್ಮ್ಯ (ನಾರದೀಯ ಪುರಾಣ)ದಲ್ಲಿದೆ, ಈ ಪದ್ಯ ವರಾಹ ಚರಮ ಶ್ಲೋಕದ ಸಾರವಾಗಿದೆ.

ಒಂದು ಸಲ ನೆನೆಯುವುದರಿಂದಲೇ ಸಂತುಷ್ಟನಾಗಿ, ಹಾಗೆ ನೆನೆಯುವ ಭಕ್ತನನ್ನು ಯಾವಾಗಲೂ ಮರೆಯದೆ, ಸ್ಮರಿಸುತ್ತಾ ಸಲಹಿ ದೇಹಪಾತವಾದ ಮೇಲೆ ಅವನಿಗೆ ಪರಮಪದವನ್ನು ಕೊಡುವುದಲ್ಲದೆ, ತಾನೇ ಅಲ್ಲಿಗೆ ಅವನನ್ನು ಒಯ್ಯುವ ಆಸೆಯುಳ್ಳ ಭೂವರಾಹಮೂರ್ತಿಗೆ ಮಂಗಳವು !

**ಸ್ವಾಂಗಸ್ವೇದ ಜಲಾಪೂರ್ಣ ಕಲ್ಯಾಣ ಸರಸಸ್ತಟೇ ||**
**ಪ್ರತೀಚ್ಯಾಂ ವಾಮಾಂಕ ಸುಸ್ಥಾಯೈ ಚರಮಶ್ಲೋಕ-**
**ಯೋರ್ದ್ವಯಂ ||**
**ಉಪದೇಷ್ಟ್ರೇ ಮಹೀದೇವ್ಯೈ ಶ್ರೀ ವರಾಹಾಯ ಮಂಗಲಂ**
**|| ೧೨ ||**

**|| ಇತಿ ಶ್ರೀ ವರಾಹಮಂಗಲಂ ||**

ಹಿರಣ್ಯಾಕ್ಷನನ್ನು ಕೊಂದು ಭೂಮಿಯನ್ನುದ್ಧರಿಸಿದ ಮಹಾ ವರಾಹ ಮೂರ್ತಿಯ ಸರ್ವಾಂಗಗಳಿಂದಲೂ ಹೊರಟ ಸ್ವೇದ (ಬೆವರು) ಜಲದಿಂದ ತುಂಬಿರುವ, ಆದುದರಿಂದ ಪರಮಪಾವನವಾದ, 'ದಕ್ಷಿಣ ಬದರಿಕಾಶ್ರಮ' ವೆಂಬ ಶ್ರೀ ಯಾದವಗಿರಿ ಕ್ಷೇತ್ರದಲ್ಲಿ (ತಿರುನಾರಾಯಣಪುರಂ, ಮೇಲುಕೋಟೆ) ಶ್ರೀ ಸಿಂಹ **ಭೂಧರದ** ತಪ್ಪಲಲ್ಲಿ ಕಂಗೊಳಿಸುವ **ಕಲ್ಯಾಣ ಸರಸ್ಸಿನ** ಪೂರ್ವದಿಕ್ಕಿನಲ್ಲಿ ತನ್ನ ಎಡ ತೊಡೆಯ ಮೇಲೆ ಕುಳಿತಿರುವ ಭೂದೇವಿಗೆ ಚರಮ ಶ್ಲೋಕಗಳೆರಡನ್ನೂ ಉಪದೇಶಿಸಿದ **ಶ್ರೀ ವರಾಹ ಮೂರ್ತಿಗೆ** ಮಂಗಳವಾಗಲಿ !

## ನಿಗಮನ

ವೇದಾಂತದ್ವಯಸಾರಜ್ಞಂ ಪುರಾಣಾರ್ಥವಿಶಾರದಂ ।
ಜಗ್ಗೂವೇಂಕಟನಾಥಾರ್ಯಂ ವಂದೇಽಹಂ ಸಜ್ಜನಪ್ರಿಯಂ ॥

ಇಂತು ಯದುಗಿರಿ ನಿತ್ಯವಾಸಿಗಳೂ 'ಬಾಲಧನ್ವಿ' ಕುಲತಿಲಕರೂ ಯಾದವಗಿರಿ ನಾರಾಯಣ ಯತಿರಾಜ ರಾಮಾನುಜರ ಪಾದಸೇವಾಸಕ್ತರೂ ಆಸ್ತಿಕಾಗ್ರೇಸರರೂ ಆದ ಶ್ರೀ ಉ. ವೇ. "ಸಾಂಖ್ಯತೀರ್ಥಂ" ಸಾಹಿತ್ಯಾಲಂಕಾರಯೋಗ ವೇದಾನ್ತ ವಿದ್ವಾಂಸರೂ ಉಭಯ ವೇದಾಂತ ಪ್ರವರ್ತಕರೂ ಆಚಾರ್ಯಾಭಿಮಾನನಿಷ್ಠರೂ ಆದ 'ಸಾಹಿತ್ಯರತ್ನಂ' ಜಗ್ಗೂ ವೇಂಕಟಾಚಾರ್ಯರು ರಚಿಸಿದ "ಶ್ರೀ ವರಾಹಮಂಗಳದ" ಕನ್ನಡ ಅನುವಾದಕ್ಕೆ ಮಹಾ ಮಂಗಳವು.

---

# ಶ್ರೀ ನೃಸಿಂಹ ಮಂಗಲಂ

ಸತ್ಯಂ ಭಕ್ತವಚಃ ಕರ್ತುಂ ವ್ಯಕ್ತ್ಯೈ ಸರ್ವತ್ರ ಚ ಸ್ಥಿತೇಃ |
ಹಿರಣ್ಯಕಶಿಪುಸ್ಪೃಷ್ಟಸ್ತಂಭೋದ್ಭೂತಾಯ ಮಂಗಲಂ ||೧||

"ಭಕ್ತನ ಮಾತು ನಿಜ" ವೆಂದು ತೋರಿಸಲು ಎಲ್ಲೆಲ್ಲಿಯೂ ತಾನಿರುವುದನ್ನು ಸ್ಪಷ್ಟಪಡಿಸಲು, ಹಿರಣ್ಯ ಕಶಿಪು ಮುಟ್ಟಿದ ಕಂಬದಿಂದ ಉದ್ಭವಿಸಿದ (ಹೊರಕ್ಕೆ ಬಂದ)ವನಿಗೆ ಮಂಗಳವು!

ವ್ಯಾತ್ತ ದಂಷ್ಟ್ರಾಕರಾಳಾಸ್ಯಲೋಲಜ್ಜಿಹ್ವಾಕ್ಷಿಗರ್ಜನೈಃ |
ಜಡೀಕೃತ ಹಿರಣ್ಯಾಯ ತಾದೃಶೋಗ್ರಾಯ ಮಂಗಲಂ ||೨||

ನೀಳವಾದ ಕೋರೆಹಲ್ಲು, ಕರಾಳವದನ, ಚಂಚಲವಾದ ನಾಲಿಗೆ ಮತ್ತು ಕಣ್ಣುಗಳಿಂದಲೂ, ಗರ್ಜಿಸುವುದರಿಂದಲೂ "ಉಗ್ರ" ನಾಗಿ ತೋರಿ ಹಿರಣ್ಯ ಕಶಿಪುವನ್ನು ಸ್ತಬ್ಧನನ್ನಾಗಿ ಮಾಡಿದ ನರಸಿಂಹ ಮೂರ್ತಿಗೆ ಮಂಗಳವು!

ವರದೇಹತಪೋವೀರ್ಯೈರವಧ್ಯಂ ಸರ್ವದೇಹಿನಾಂ |
ದೈತ್ಯಂ ನಖೈರ್ದಲಯತೇ ತಸ್ಮೈ ವೀರಾಯ ಮಂಗಲಂ ||೩||

ಶ್ರೇಷ್ಠವಾದ (ಬ್ರಹ್ಮನಿಂದ ವರವಾಗಿ ಪಡೆದ) ದೇಹಬಲ, ತಪಶ್ಶಕ್ತಿ ಮತ್ತು ವೀರ್ಯ ಇವುಗಳಿಂದ ಎಲ್ಲ ಜೀವಿಗಳಿಗೂ ಕೊಲ್ಲಲಾಗದೆ ಇದ್ದ ದೈತ್ಯನನ್ನು ಉಗುರುಗಳಿಂದ ಸೀಳಿದ ಆ ವೀರನಿಗೆ ಮಂಗಳವು!

ದ್ಯಾವಾಭೂಮೀದಿಶಸ್ಸರ್ವಾಃ ಸ್ವಾಂಗೈರ್ವ್ಯಾಪ್ಯ ಚ ತಿಷ್ಠತೇ |
ಮಹಾವಿಷ್ಣುಸಮಾಖ್ಯಾಯ ನರಸಿಂಹಾಯ ಮಂಗಲಂ ||೪||

ಆಕಾಶ, ಭೂಮಿ, ಮತ್ತು ದಿಕ್ಕುಗಳನ್ನೆಲ್ಲ ತನ್ನ ಅವಯವಗಳಿಂದ ವ್ಯಾಪಿಸಿ ನಿಂತಿರುವ, ಮಹಾವಿಷ್ಣು ಎಂಬ ಹೆಸರುಳ್ಳ ಶ್ರೀ ನರಸಿಂಹ ಮೂರ್ತಿಗೆ ಮಂಗಳವು!

ಸೂರ್ಯೇಂದುವಹ್ನಿಭಜ್ಯೋತಿಃ ಜ್ವಾಲಯಾ ಯಸ್ಯ ದೀಪ್ಯತೇ|
ಸರ್ವದಾ ಜ್ವಲತೇ ತಸ್ಮೈ ನರಸಿಂಹಾಯ ಮಂಗಲಂ || ೫ ||

ಸೂರ್ಯ ಚಂದ್ರರು, ಅಗ್ನಿ, ನಕ್ಷತ್ರಗಳು ಇವುಗಳ ಬೆಳಕು ಯಾರ ಕಾಂತಿಯಿಂದ ಬೆಳಗುವುದೋ ಆ ಸದಾ 'ಜ್ವಲಂತ' (ಪ್ರಕಾಶಮಾನ) ವಾಗಿರುವ ನರಸಿಂಹನಿಗೆ ಮಂಗಳವು!

ದೇಶ ಕಾಲಾಕ್ಷ ನಿಯಮಂ ಹಿತ್ವಾ ಸರ್ವಂ ಪ್ರಪಶ್ಯತೇ |
ಸರ್ವತೋ ಮುಖವಾಚ್ಯಾಯ ನರಸಿಂಹಾಯ ಮಂಗಲಂ ||೬||

ದೇಶ ಕಾಲ ಇಂದ್ರಿಯಗಳ ನಿಯಮವಿಲ್ಲದೆ ಎಲ್ಲವನ್ನೂ ಸದಾ ವಿಶದ ವಾಗಿ ನೋಡುವ " ಸರ್ವತೋಮುಖ " ನೆಂಬ ನರಸಿಂಹನಿಗೆ ಮಂಗಳವು !

ನ ಮೃಗಾಯ ನ ಮರ್ತ್ಯಾಯ ನ ಮಾತಾಪಿತೃಜಾಯ ಚ |
ವಿಚಿತ್ರ ಭೂಮಜುಷ್ಟಾಯ ನರಸಿಂಹಾಯ ಮಂಗಲಂ ‖ ೭ ‖

ಮೃಗವೂ ಅಲ್ಲದ, ಮನುಷ್ಯನೂ ಅಲ್ಲದ, ತಾಯಿತಂದೆ ಇಲ್ಲದ, ವಿಚಿತ್ರ ಮಹಿಮಾಶಾಲಿಯಾದ ನರಸಿಂಹನಿಗೆ ಮಂಗಳವು !

ಸ್ವನಾಮಕಥನಾತ್ ಸ್ಮೃತ್ಯಾ ರೋಗಗ್ರಹ ವಿಷಾದಿಕಾ |
ವಿರೋಧಿನೋ ನಾಶಯತೇ ಭೀಷಣಾಯಾಸ್ತು ಮಂಗಲಂ
‖ ೮ ‖

ತನ್ನ ಹೆಸರನ್ನು ಹೇಳಿದರೆ ಅಥವಾ ತನ್ನನ್ನು ನೆನೆದರೆ ಹಾಗೆ ಸ್ಮರಣ ಕೀರ್ತನ ಮಾಡುವವರ ರೋಗ, ಗ್ರಹ, ವಿಷ, ಶತ್ರುಗಳ ಬಾಧೆಗಳನ್ನು ನಾಶ ಮಾಡುವನೋ ' ಆ ಭೀಷಣ ' ಮೂರ್ತಿಗೆ ಮಂಗಳವು !

ಭದ್ರಾಖ್ಯಯಾ ಶ್ರಿಯಾ ಜುಷ್ಟಂ ಯಮಾಶ್ರಿತ್ಯ ನರೋಽಖಿಲಂ
ಭದ್ರಮಾಪ್ನೋತಿ ಸತತಂ ತಸ್ಮೈ ಭದ್ರಾಯ ಮಂಗಲಂ ‖ ೯ ‖

"ಭದ್ರ" (ಮಂಗಳಕರ) ಎಂಬ ಹೆಸರಿನಿಂದಲೂ ಶ್ರೀದೇವಿಯೊಡನೆಯೂ ಶೋಭಿಸುವ ಯಾರನ್ನು ಆಶ್ರಯಿಸುವ ಮನುಷ್ಯನು ಸದಾ ಸರ್ವಮಂಗಳವನ್ನೂ ಹೊಂದುವನೋ ಆ " ಭದ್ರ " ಮೂರ್ತಿಗೆ ಮಂಗಳವು !

ಸ್ವಲ್ಪಕಾಲಪ್ರಾಪ್ತಮಪಿ ಯೋ ಮೃತ್ಯುಂ ಭಕ್ತಸ್ಯ ನಾಶಯೇತ್ |
ಭಕ್ತಪ್ರಿಯಾಯ ತಸ್ಮೈ ಸ್ಯಾತ್ ಮಂಗಲಂ ಮೃತ್ಯುಮೃತ್ಯವೇ ||೧೦||

ಭಕ್ತನಿಗೆ ಸಕಾಲದಲ್ಲಿ ಬಂದ ಮರಣವನ್ನೂ ನಾಶಗೊಳಿಸುವ ಆ ಭಕ್ತ ಪ್ರಿಯನಾದ " ಮೃತ್ಯುಮೃತ್ಯು " ವಿಗೆ ಮಂಗಳವಾಗಲಿ !

ಯಚ್ಛೇಷಿತಾಪಾರತಂತ್ರ್ಯೇ ನಮ ಇತ್ಯನುಸನ್ದಧತ್ |
ಸರ್ವಮಿಷ್ಟಮವಾಪ್ನೋತಿ ತಸ್ಮೈ ನೃಹರಯೇ ಶುಭಂ ‖ ೧೧ ‖

ಯಾವ ಪುರುಷೋತ್ತಮನಿಗೆ ಆಳಾಗಿ, ಪರತಂತ್ರನಾಗಿ, "ನಮ" ಎನ್ನುವವನು (ನಮಿಸುವರು) ತನ್ನ ಬಯಕೆಗಳನ್ನೆಲ್ಲ ಹೊಂದುವನೋ ಆ ಸರ್ವಾಭೀಷ್ಟಪ್ರದನಾದ ನರಹರಿಗೆ ಮಂಗಳವಾಗಲಿ!

**ತದ್ದಾಸ್ಯಂ ಸರ್ವಜನ್ತೂನಾಂ ಸ್ವರೂಪಾನುಗುಣಂ ತತಃ |**
**ಮತ್ಸ್ತುತಿಂ ಸ್ವೀಕೃತವತೇ ನರಸಿಂಹಾಯ ಮಂಗಲಂ ||೧೨||**

ಆದುದರಿಂದ ಎಲ್ಲಾ ಜೀವಿಗಳಿಗೂ **ನಿನಗೆ ಅಡಿಯಾಳಾಗಿ** ಇರುವುದೇ (ನಿನ್ನ ದಾಸ್ಯವೇ) ಉಚಿತವೂ ಸ್ವರೂಪಕ್ಕೆ ತಕ್ಕುದೂ ಆಗಿರುವುದು. ಹಾಗಿರುವಂತೆ ಕರುಣಿಸಿ ನನ್ನ ಸ್ತೋತ್ರವನ್ನು ಅಂಗೀಕರಿಸಿದ ನೃಸಿಂಹಮೂರ್ತೇ! ನಿನಗೆ ಮಂಗಳವು!

## ನಿಗಮನ

**ವೇದಾನ್ತದ್ವಯಸಾರಜ್ಞಂ ಮಂತ್ರಶಾಸ್ತ್ರವಿಚಕ್ಷಣಂ |**
**ಜಗ್ಗೂ ವೆಂಕಟನಾಥಾರ್ಯಂ ವಂದೇಽಹಂ ಸಜ್ಜನ ಪ್ರಿಯಂ ||**

ಶ್ರೀಮದಿತ್ಯಾದಿ ಜಗ್ಗೂ ವೇಂಕಟಾಚಾರ್ಯಸ್ವಾಮಿಗಳೂ ದಿವಂಗತ ಮಂತ್ರಮೂರ್ತಿ ಶ್ರೀ ಉ. ವೇ. ಸಲ್ಲಾರ್ ನರಸಿಂಹ ನಾರಾಯಣ ಗುರುಗಳೂ (ತಿರುನಾರಾಯಣೈಯಂಗಾರ್ಯರು) ಈ ಶತಕದ ಆದಿಯಲ್ಲಿ ಯದುಗಿರಿಯಲ್ಲಿದ್ದ ಮಂತ್ರಸಿದ್ಧರಾದ ಶ್ರೀ ಉ. ವೇ. ಕೌಂಡಿನ್ಯ ಕುಲತಿಲಕ **ಶ್ರೀನಿವಾಸ ವರದಾಚಾರ್ಯ**ರೆಂಬ ಮಹಾತ್ಮರನ್ನು ಆಶ್ರಯಿಸಿ ಅವರ ಸೇವೆಮಾಡಿ ಅವರ ಅನುಗ್ರಹದಿಂದ ಶ್ರೀ ನೃಸಿಂಹ ಸುದರ್ಶನಾದಿ ಮಂತ್ರಗಳ ಉಪದೇಶವನ್ನು ಪಡೆದು ಅವುಗಳನ್ನು ನಿಯಮದಿಂದ ಜಪಿಸಿ ಹೋಮ ಪಾರಾಯಣಗಳಿಂದ ಶ್ರೀ ನರಸಿಂಹ ಸುದರ್ಶನರನ್ನು ಆರಾಧಿಸಿ ಧನ್ಯರಾದವರು. **ಶ್ರೀ ಶಂಕರ** ರಚಿತವಾದ '**ಮಂತ್ರರಾಜ ಪದಸ್ತುತಿ**'ಯಂತೆ ಭಗವದನುಗ್ರಹದಿಂದ ಈ ಭಾಗವತೋತ್ತಮರು ರಚಿಸಿದ "ಈ **ನೃಸಿಂಹ ಮಂಗಳ**"ವೂ ಶ್ರೀ ನೃಸಿಂಹ ಮಂತ್ರದ ಪದಗಳಿಂದಲೂ ಅರ್ಥ ವಿಶೇಷಗಳಿಂದಲೂ ಕೂಡಿ ಭಕ್ತರಿಗೆ ಅಮೃತದಂತೆ, ನಿಧಿಯಂತೆ, ಅನುಭವಯೋಗ್ಯವಾಗಿದೆ. ಇದು ಶ್ರೀ ಲಕ್ಷ್ಮೀನೃಸಿಂಹನ ಪ್ರಸಾದವನ್ನು ಅನುಗ್ರಹಿಸುವುದು.

---

# ಶ್ರೀ ವಾಮನ ಮಂಗಲಂ

**ದೇವಾನಾಂ ರಾಜ್ಯಲಾಭಾಯ ದೈತ್ಯಾನಾಂ ತತ್–ಪ್ರಹಾಣಯೇ |**
**ಕಶ್ಯಪಾದದಿತೇರ್ಗರ್ಭಾತ್ ಪ್ರಸೂತಾಯಾಸ್ತು ಮಂಗಲಂ ॥ ೧ ॥**

ದೇವತೆಗಳಿಗೆ ರಾಜ್ಯಲಾಭವಾಗಿ ದೈತ್ಯರಿಗೆ ತಾವು ಆಕ್ರಮಿಸಿದ್ದ ಸ್ವರ್ಗ ನಷ್ಟವಾಗುವಂತೆ ಕಶ್ಯಪರಿಗೆ ಅದಿತಿಯಲ್ಲಿ ಹುಟ್ಟಿದ ವಾಮನನಿಗೆ ಮಂಗಳ ವಾಗಲಿ !

**ದೇವರ್ಷಿ ಪಿತೃ ಗಂಧರ್ವ ನಾಗ ಕಿನ್ನರ ಪೂರ್ವಕೈಃ |**
**ಸರ್ವೈರಭಿಷ್ಟುತಾಯಾಸ್ತು ಮಂಗಲಂ ವಾಮನಾಯ ತೇ ॥೨॥**

ದೇವತೆಗಳು ಋಷಿಗಳು ಪಿತೃಗಳು ಗಂಧರ್ವರು ನಾಗರು ಕಿನ್ನರರೇ ಮೊದಲಾದ ಎಲ್ಲರಿಂದಲೂ ಎಲ್ಲೆಲ್ಲೂ ಸ್ತುತಿಸಲ್ಪಟ್ಟ ವಾಮನನೇ, ನಿನಗೆ ಮಂಗಳವು !

**ಮೌಂಜೀದಂಡಾಜಿನಚ್ಛತ್ರೋಪವೀತ ಕೃತಲಕ್ಷ್ಮಣೇ |**
**ವರ್ಣಿನೇ ರಕ್ತನೇತ್ರಾಯ ವಾಮನಾಯಾಸ್ತು ಮಂಗಲಂ ॥ ೩ ॥**

ಬ್ರಹ್ಮಚಾರಿಯಾಗಿ ಮೌಂಜೀ, ದಂಡ, ಕೃಷ್ಣಾಜಿನ, ಛತ್ರಿ, ಉಪವೀತ (ಜನಿವಾರ) ಗಳೆಂಬ ಪ್ರಥಮಾಶ್ರಮವನ್ನು ಸೂಚಿಸುವ ಲಕ್ಷಣಗಳಿಂದ ಪೂರ್ಣನಾಗಿ ಶೋಭಿಸುವ, ಕೆಂಪು ಕಣ್ಣುಗಳುಳ್ಳ, ವಾಮನನಿಗೆ ಮಂಗಳವು !

**ಬಲಿಯಜ್ಞಗತೈಸ್ಸರ್ವೈಃ ಋತ್ವಿಗ್ಭಿಸ್ಸಹ ಭಾರ್ಗವಂ |**
**ವಾಕ್ಯಾರ್ಥೈರ್ಯಜ್ಞಿಕೈರ್ಜೇತ್ರೇ ವಾಮನಾಯಾಸ್ತು ಮಂಗಲಂ ॥**

ಮಹಾಬಲಿಯ ಯಾಗಶಾಲೆಗೆ ಹೋಗಿ ಅಲ್ಲಿದ್ದ ಎಲ್ಲಾ ಋತ್ವಿಜರುಗಳ ಸಹಿತ ಶುಕ್ರಾಚಾರ್ಯರನ್ನು ಯಜ್ಞಕ್ಕೆ ಸಂಬಂಧಪಟ್ಟ ವಾಕ್ಯಾರ್ಥಗಳಲ್ಲಿ ಜಯಿಸಿದ ವಾಮನನಿಗೆ ಮಂಗಳವಾಗಲಿ !

**ರೂಪೇಣಾಪ್ರತಿರೂಪೇಣ ಚಾಟುನಾ ವಚಸಾ ಗುಣೈಃ |**
**ಮಂಗಲಂ ಬ್ರಹ್ಮತೇಜೋಭಿಃ ಬಲಿವ್ಯಾಮೋಹಕಾರಿಣೇ ॥ ೫ ॥**

ಎಣೆಯಿಲ್ಲದ ರೂಪದಿಂದಲೂ ಚಾಟೂಕ್ತಿಗಳಿಂದಲೂ ಗುಣಗಳಿಂದಲೂ ಬ್ರಹ್ಮತೇಜಸ್ಸಿನಿಂದಲೂ ಬಲಿಯನ್ನು ಮರುಳ್ಗೊಳಿಸಿದವನಿಗೆ ಮಂಗಳವು !

ಸರ್ವಸ್ಮೈ ಸರ್ವದಾ ಸರ್ವಫಲದಾತ್ರೇಽಪಿ ಯಾಚತೇ |
ಬಲಿಂ ಪದತ್ರಯಮಿತಾಂ ಭೂಮಿಂ ಕುಬ್ಜಾಯ ಮಂಗಲಂ ||

ಎಲ್ಲರಿಗೂ ಯಾವಾಗಲೂ ಎಲ್ಲಾ ಫಲಗಳನ್ನೂ ಕೊಡುವವನಾದರೂ "ಮೂರಡಿ ಮಣ್ಣನ್ನು ಕೊಡು" ಎಂದು ಮಹಾಬಲಿಯನ್ನು ಬೇಡಿದ ಕುಳ್ಳ (ವಾಮನ) ನಿಗೆ ಮಂಗಳವಾಗಲಿ !

ಸೃಷ್ಟಿಪಾಲನ ಸಂಹಾರೋದ್ಧಾರಣಾದಿಭಿರಾತ್ಮನಃ |
ಸ್ವೀಯಾಮಪಿ ಕ್ಷಿತಿಂ ಸ್ವಲ್ಪಾಂ ಯಾಚಮಾನಾಯ ಮಂಗಳಂ ||೭||

ತಾನೇ ಸೃಷ್ಟಿಮಾಡಿ ಸಂರಕ್ಷಿಸಿ ಪ್ರಳಯಕಾಲದಲ್ಲಿ ಸಂಹರಿಸಿ ಹಿರಣ್ಯಾಕ್ಷನು ಪೀಡಿಸಿದಾಗ ಮೇಲಕ್ಕೆತ್ತಿ "ಉದ್ಧಾರ" ಮಾಡಿದುದರಿಂದ ತನ್ನದೇ ಆಗಿರುವ ಭೂಮಿಯ ಅಲ್ಪಾಂಶವನ್ನು ಬೇಡುವವನಿಗೆ ಮಂಗಳವು !

ಯಾಚಿತ್ವಾಲ್ಪೇನ ಪಾದೇನ ಬೃಹತಾ ಮಾತುಮಿಚ್ಛತೇ |
ಮಂಗಲಂ ವಾಮನಾಯಾಸ್ತು ಕಪಟಾಯೈವ ಸಂತತಂ || ೮ ||

ಕಿರಿಯ ಕಾಲನ್ನು ತೋರಿಸಿ ಬೇಡಿ, 'ತ್ರಿವಿಕ್ರಮ'ನಾಗಿ ಬೆಳೆದು, ಹಿರಿಯ ಕಾಲಿನಿಂದ ಅಳೆಯ ಬಯಸಿದ, "ಮಾಯಾವಾಮನ"ನಿಗೆ ಸದಾ ಮಂಗಳವಾಗಲಿ !

ಕೈತವಂ ಚಾಪಮಾನಂ ಚ ರೂಪಾಂತರಮನಾಪ್ಯ ಮಾಂ |
ರಕ್ಷತೇ ಸ್ವೇನ ರೂಪೇಣ ವಾಮನಾಯಾಸ್ತು ಮಂಗಳಂ || ೯ ||

ಮೋಸ, ಅಪಮಾನ, ರೂಪಾಂತರಗಳಿಗೆ ಎಡೆ ಇಲ್ಲದಂತೆ ಸ್ವತಃ ಸಿದ್ಧವಾದ ತನ್ನ 'ನಿಜ' ರೂಪದಿಂದ ನನ್ನನ್ನು ಸಲಹುವ ವಾಮನನಿಗೆ ಮಂಗಳವು !

ದಕ್ಷಿಣೇನ ಕರೇಣಾನ್ನಂ ದಧಿಖಂಡಂ ಚ ಬಿಭ್ರತೇ |
ರುಕ್ಮ ಪಾತ್ರೇಽನ್ಯ ಹಸ್ತೇನ ಪೀಯೂಷ ಕಲಶಂ ಶುಭಂ ||೧೦||

ಬಲಗೈಯ ಹೊಂಬಟ್ಟಲಿನಲ್ಲಿ ಮೊಸರನ್ನವನ್ನೂ ಮತ್ತೊಂದು ಕೈಯಲ್ಲಿ ಅಮೃತ ಕಲಶವನ್ನೂ ಧರಿಸಿರುವ ವಾಮನನಿಗೆ ಶುಭವಾಗಲಿ !

**ವಸಿಷ್ಠಮಾತಂಗಭಿದಾಮನಪೇಕ್ಷ್ಯ ಪದಾಂಬುಜಂ ।**
**ನಿಧಾತ್ರೇ ಸರ್ವಶಿರಸಿ ಮಂಗಲಂ ತೇ ತ್ರಿವಿಕ್ರಮ ॥ ೧೧ ॥**

ವಸಿಷ್ಠರಂತೆ ಪರಿಶುದ್ಧರಾದ ಬ್ರಾಹ್ಮಣರು ಇವರು, ಚಂಡಾಲರಂತೆ ಅಶುದ್ಧರು ಇವರು ಎಂದು ಭೇದವೆಣಿಸದೆ ಎಲ್ಲರ ತಲೆಯ ಮೇಲೂ ಶ್ರೀಮತ್ ಪಾದಾಂಬುಜವನ್ನಿಟ್ಟು (ಎಲ್ಲರನ್ನೂ ಆಳಾಗಿ ಕೊಂಡು) ಸ್ವಾಮಿತ್ವವನ್ನು ಪ್ರಕಾಶಪಡಿಸಿದ ಜಗದ್ರಕ್ಷಕನಾದ ತ್ರಿವಿಕ್ರಮನೇ! ನಿನಗೆ ಮಂಗಲವಾಗಲಿ!

**"ಇದಂ ವಿಷ್ಣುರ್ವಿಚಕ್ರಮೇ" ಕಿಂಚ "ತ್ರೀಣಿಪದೇ" ತಿ ಚ ।**
**ಶ್ರುತಿವಾಕ್ಯಾನ್ಯಲಂಕರ್ತ್ರೇ ಮಂಗಲಂ ತೇ ತ್ರಿವಿಕ್ರಮ ॥ ೧೨ ॥**

"ಇದಂ ವಿಷ್ಣುಃ ವಿಚಕ್ರಮೇ" "ತ್ರೀಣಿ ಪದಾ ವಿಚಕ್ರಮೇ" ಎಂದು ಮೊದಲಾದ ಋಕ್ಕು (ಶ್ರುತಿವಾಕ್ಯ) ಗಳನ್ನು ಸಾರ್ಥಕಪಡಿಸಲೋ ಏನೋ ಎನ್ನುವಂತೆ ದೇವಕಾರ್ಯಾರ್ಥವಾಗಿ ಮಹಾಬಲಿಯ ಔದಾರ್ಯಕ್ಕೆ ಮೆಚ್ಚಿ ಮಾಣಿಯಾಗಿ ಅವನ ಯಾಗಶಾಲೆಗೆ ಹೋಗಿ ಎಂದೂ ಯಾರನ್ನೂ ಏನನ್ನೂ ಬೇಡದ ನಿನ್ನ ಕೈಗಳನ್ನು ಚಾಚಿ "ಮೂರಡಿ ಮಣ್ಣನ್ನು ಬೇಡಿ" ದಾನಮಾಡುವಾಗ ಜಲಧಾರೆ ಬಿದ್ದೊಡನೆ ತ್ರಿವಿಕ್ರಮನಾಗಿ ಬೆಳೆದು ಮೂರು ಲೋಕಗಳನ್ನು ಅಳೆದ ಹಿರಿಯನೇ! ನಿನಗೆ ಮಂಗಳವಾಗಲಿ!

**ಸತ್ಯಸಂಧಂ ಬಲಿಂ ಕರ್ತುಂ ತನ್ಮಸ್ತನ್ಯಸ್ತ ಪಾದ! ಭೋಃ ॥**
**ಮಂಗಲಂ ತದ್ಗೃಹದ್ವಾರ-ಪಾಲಾಯಾಸ್ತು ಶ್ರಿಯಃ ಪತೇ ॥ ೧೩ ॥**

ಬಲಿಯ ಮಾತು ನಿಜವಾಗಿ ಅವನು ಸತ್ಯಸಂಧನೆಂಬ ಯಶಸ್ಸನ್ನೂ ಪಡೆಯುವಂತೆ ಅವನ ತಲೆಯ ಮೇಲೆ ಅಭಿವಾದಾಚಾರ್ಯರುಗಳು ಬಯಸಿದ ನಿನ್ನ ಸುಕುಮಾರವಾದ ಪಾದವನ್ನಿಟ್ಟವನೇ, ಅವನ ಆಸೆಯಂತೆ ಪಾತಾಳ ಲೋಕದಲ್ಲಿ ಶಂಖ ಚಕ್ರ ಗದಾಪಾಣಿಯಾಗಿ ಅವನ ಮನೆ ಬಾಗಿಲಿನಲ್ಲಿ ನಿಂತು ಕಾಯುತ್ತಿರುವ ಶ್ರೀಪತಿಯೇ, ನಿನಗೆ ಮಂಗಳವಾಗಲಿ!

## ನಿಗಮನ

**ವೇದಾಂತದ್ವಯಸಾರಜ್ಞಂ ಪುರಾಣಾರ್ಥವಿಶಾರದಂ |**
**ಜಗ್ಗೂ ವೇಂಕಟನಾಥಾರ್ಯಂ ವಂದೇಽಹಂ ಸಜ್ಜನಪ್ರಿಯಂ || ೧ ||**

ಮಹಾವಿಷ್ಣುವಿನ ಅವತಾರಗಳಲ್ಲಿ ವಾಮನಾವತಾರವೂ ಕೃಷ್ಣಾವತಾರವೂ ಆಳ್ವಾರುಗಳಿಗೆ ಬಹು ಪ್ರಿಯವಾದವು. ಕಾಂಚಿಪುರದಲ್ಲಿ "ಉಲಹಮಳಂದಾನ್" (ತ್ರಿವಿಕ್ರಮ) ಸನ್ನಿಧಿಯಲ್ಲಿ ಈ ಮಂಗಲಾಶಾಸನ ಕೃತಿಯನ್ನು ಮತ್ತು ಉಳಿದವನ್ನೂ ಗ್ರಂಥ ಕರ್ತೃಗಳೇ ಮಹಾಪಂಡಿತರ ಸಂಘದಲ್ಲಿ ಸಮರ್ಪಿಸಿದ ರೆಂದು ತಿಳಿದುಬರುತ್ತದೆ. ಈ ಕೃತಿಯನ್ನು ೧೨-೧೧-೬೦ರಲ್ಲಿ ಅನುವಾದಕನೂ " ತ್ರಿವಿಕ್ರಮ " ನಿಗೆ ಬಿನ್ನಹ ಮಾಡುವ ಭಾಗ್ಯವೊದಗಿದ್ದಿತು.

---

# ಶ್ರೀ ವಿಷ್ಣು ಮಂಗಲಂ

**ಕಿರೀಟ ಹಾರಕೇಯೂರ ಕುಂಡಲಾದಿ ವಿಭೂಷಣೈಃ |**
**ವಿರಾಜತೇ ನೂಪುರಾನ್ತ್ಯೈರ್ವಿಷ್ಣವೇ ತೇಽಸ್ತು ಮಂಗಲಂ || ೧ ||**

ಕಿರೀಟ, ಹಾರ, ಕಂಕಣ, ಕರ್ಣಕುಂಡಲಗಳಿಂದ ಮೊದಲಾಗಿ ನೂಪುರಪಾಡಗದವರೆಗೆ ಇರುವ ಒಡವೆಗಳಿಂದ ಬೆಳಗುವ ಸರ್ವವ್ಯಾಪಿಯಾದ ವಿಷ್ಣುವೇ, ನಿನಗೆ ಮಂಗಳವಾಗಲಿ !

**ಶಂಖಚಕ್ರಗದಾ ಪದ್ಮ ಶಾರ್ಙ್ಗ ನಂದಕ ಪೂರ್ವಕೈಃ |**
**ಆಯುಧೈರ್ಭಾಸ್ವರಾಂಗಾಯ ವಿಷ್ಣವೇ ತೇಽಸ್ತು ಮಂಗಲಂ || ೨ ||**

ಶಂಖ, ಚಕ್ರ, ಗದೆ, ಪದ್ಮ, ಶಾರ್ಙ್ಗವೆಂಬ ಬಿಲ್ಲು, ನಂದಕ ಎಂಬ ಕತ್ತಿ, ಇವೇ ಮೊದಲಾದ ಆಯುಧಗಳಿಂದ ಹೊಳೆಯುವ ದಿವ್ಯಾವಯವಗಳುಳ್ಳ ವಿಷ್ಣುವೇ, ನಿನಗೆ ಮಂಗಲವಾಗಲಿ !

**ಫುಲ್ಲಪದ್ಮಸ್ಥಿತತ್ವೇನ ಸಂದಿಗ್ಧ ಚರಣಾಯ ತೇ |**
**ಮೃದು ಸುಂದರ ಗಾತ್ರಾಯ ವಿಷ್ಣವೇ ಸ್ಯಾತ್ ಸುಮಂಗಲಂ|| ೩ ||**

ಚೆನ್ನಾಗಿ ಅರಳಿರುವ ಕಮಲದಲ್ಲಿ ನಿಂತಿರುವುದರಿಂದ "ಇದು ಕಮಲವೋ ಅಥವಾ ಪಾದವೋ" ಎಂಬ ಸಂದೇಹಜನಕವಾದ ಕೋಮಲವಾದ ಚರಣಗಳನ್ನುಳ್ಳ, ಬಲು ಚೆಲುವಾಗಿಯೂ ಮೆದುವಾಗಿಯೂ ಇರುವ ಮೈಯನ್ನುಳ್ಳ, "ಸುಕುಮಾರ" ನಾದ ವಿಷ್ಣುವೇ, ನಿನಗೆ ಸನ್ಮಂಗಲವಾಗಲಿ!

**ಪೀತಾಂಬರ ಸುಸಂವೀತ ಮೇಘಶ್ಯಾಮಲಮೂರ್ತಯೇ |**
**ಅಕ್ಷ್ಣೋರಾಸೇಚನಕೃತೇ ವಿಷ್ಣವೇ ತೇಽಸ್ತು ಮಂಗಲಂ ||೪||**

ಪೀತಾಂಬರವನ್ನು ಅಂದವಾಗಿ ಧರಿಸಿರುವ, ಮಳೆಮುಗಿಲಿನಂತೆ ಬೆಳಗುವ, ಶ್ಯಾಮಲ ಮೂರ್ತಿಯೇ, ಕಣ್ಣುಗಳಿಗೆ ಎಷ್ಟು ನೋಡಿದರೂ ತೃಪ್ತಿ ಆಗದಂತೆ ಇರುವ ವಿಷ್ಣುವೇ, ನಿನಗೆ ಮಂಗಲವಾಗಲಿ !

**ಪುಂಡರೀಕದಳಾಕಾರ ಶರೇಣಾ(ಚಕ್ಷುಷಾ)ಮೃತವರ್ಷಿಣೇ |**
**ಮಾಮಾಪ್ಯಾಯ ಯತೇಽತ್ಯರ್ಥಂ ವಿಷ್ಣವೇ ತೇಽಸ್ತು ಮಂಗಲಂ||೫||**

ಕಮಲದ ಎಸಳಿನಂತಿರುವ ಕಂಗಳೆಂಬ ಬಾಣಗಳಿಂದ ಅಮೃತದ ಮಳೆಯನ್ನು ಸುರಿಸಿ ನನ್ನ ಮನಸ್ಸಿಗೆ ಆನಂದ (ನೆಮ್ಮದಿಯನ್ನೀಯುತ್ತ, ತಾಪವನ್ನು ಕಳೆಯುವ) ವನ್ನೀಯುವ ವಿಷ್ಣುವೇ ನಿನಗೆ ಮಂಗಳವಾಗಲಿ!

ಸ್ಮಿತಪೂರ್ವೇಣ ವಚಸಾ ಕರುಣಾಮೃತ ವರ್ಷಿಣಾ |
ಆಹ್ಲಾದಕಾರಿಣೇ ನಿತ್ಯಂ ವಿಷ್ಣವೇ ಶೇsಸ್ತು ಮಂಗಲಂ || ೬ ||

ಯಾವಾಗಲೂ ಮಂದಹಾಸವನ್ನು ಸೂಸುತ್ತಾ, ಕರುಣಾಮೃತವನ್ನು ಸುರಿಸುವ ನುಡಿಗಳಿಂದ ಆನಂದವನ್ನು ಬೀರುವ ವಿಷ್ಣುವೇ, ನಿನಗೆ ಮಂಗಲವಾಗಲಿ!

ಸೌಮ್ಯರೂಪಾಯ ತೇಜೋಭಿಃ ಕೋಟಿಸೂರ್ಯಾಭಿಭಾವಿನೇ |
ಶ್ರೀವತ್ಸಕೌಸ್ತುಭ ಶ್ರೀಭಿಃ ಭಾಸ್ವತೇ ಶೇsಸ್ತು ಮಂಗಲಂ || ೭ ||

ಪ್ರಕಾಶದಲ್ಲಿ ಕೋಟಿ ಸೂರ್ಯರಿಗೆ ಮಿಗಿಲಾಗಿದ್ದರೂ ಸೌಮ್ಯವಾಗಿರುವ ತೇಜಸ್ಸಿನಿಂದಲೂ, ಶ್ರೀವತ್ಸಲಾಂಛನ ಕೌಸ್ತುಭರತ್ನ ಮತ್ತು ಶ್ರೀದೇವಿ ಇವರ ತೇಜಸ್ಸಿನಿಂದಲೂ ಹೊಳೆಯುವ ಪರದೇವತೆಯೇ, ನಿನಗೆ ಮಂಗಲವಾಗಲಿ!

ಬ್ರಹ್ಮರುದ್ರ ಮುಖೇನೈವ ಸೃಷ್ಟಿ ಸಂಹಾರಕಾರಿಣೇ |
ರಕ್ಷಿತ್ರೇ ಸ್ವಯಮೇವಾಸ್ಯ ವಿಷ್ಣವೇ ಶೇsಸ್ತು ಮಂಗಲಂ || ೮ ||

ಈ ಜಗತ್‌ಸೃಷ್ಟಿಯನ್ನು ಬ್ರಹ್ಮಾಂತರ್ಯಾಮಿಯಾಗಿಯೂ, ಸಂಹಾರವನ್ನು ರುದ್ರನ ಅಂತರ್ಯಾಮಿಯಾಗಿಯೂ ಮಾಡುವ, ಆದರೆ ಜಗದ್ರಕ್ಷಣೆಯನ್ನು ನಿನ್ನ ನಿಜ ಸ್ವರೂಪದಿಂದ ಮಾಡುವ ವಿಷ್ಣುವೇ, ನಿನಗೆ ಮಂಗಲವಾಗಲಿ!

ಸಮಸ್ತ ಚಿದಚಿದ್ವಸ್ತು ವ್ಯಾಪಿನೇ ಪರಮಾತ್ಮನೇ |
ವಿಷ್ಣು ಶಬ್ದ ಸ್ವವಾಚ್ಯಾಯ ವಿಷ್ಣವೇ ತೇsಸ್ತು ಮಂಗಲಂ || ೯ ||

ಎಲ್ಲಾ ಚಿದಚಿದ್ವಸ್ತುಗಳಲ್ಲಿಯೂ ಅಂತರ್ಯಾಮಿಯಾಗಿ ನೆಲೆಸಿ ವ್ಯಾಪಿಸಿರುವವನೇ, ಸರ್ವೋತ್ಕೃಷ್ಟವಾದ ಆತ್ಮನೇ, ಪರಮಾತ್ಮಾ ಸತ್ ಬ್ರಹ್ಮಾತ್ಮ ವಿಷ್ಣು ಎಂಬ ಶಬ್ದಗಳಿಂದ ಕರೆಯಲ್ಪಡಲು ಅರ್ಹನಾಗಿರುವ ವಿಷ್ಣುವೇ, ನಿನಗೆ ಮಂಗಲವಾಗಲಿ!

## ನಿಗಮನಂ

" ತದ್ವಿಷ್ಣೋಃ ಪರಮಂ ಪದಂ ", " ವಿಷ್ಣವೇ ಚಾರ್ಚತ," " ಇದಂ ವಿಷ್ಣುರ್ವಿಚಕ್ರಮೇ," " ಯಜ್ಞೋ ವೈ ವಿಷ್ಣುಃ " ಇತ್ಯಾದಿ ಶ್ರುತಿಗಳು ಸರ್ವಾಂತರ್ಯಾಮಿಯೂ ಸರ್ವವ್ಯಾಪಿಯೂ ಸರ್ವಕರ್ಮಸಮಾರಾಧ್ಯನೂ ಸರ್ವಫಲಪ್ರದನೂ ಸಕಲ ಕಲ್ಯಾಣಗುಣಶಾಲಿಯೂ ಆಗಿರುವ ಶ್ರೀ ವಿಷ್ಣುವೇ " ಪರತತ್ತ್ವ" ಎಂದು ಸಾರುತ್ತಿವೆ; ಅವನೇ ಪೂಜಾರ್ಹನು, ಸ್ತುತ್ಯನು, ಸ್ತುವಪ್ರಿಯನು, ಆ ಮಹಾವಿಷ್ಣುವಿಗೆ ಮಂಗಲವಾಗಲಿ !

---

# ಶ್ರೀ ಸುದರ್ಶನ ಮಂಗಲಂ

**ಜಯದ್ರಥವಧೋದ್ಯುಕ್ತ ಸ್ವಾಮಿಸಂಕಲ್ಪರೂಪಿಣೇ |**
**ಕೋಟಿಸೂರ್ಯಪ್ರಕಾಶಾಯ ತೇಜಃಪುಂಜಾಯ ಮಂಗಲಂ || ೧ ||**

ಜಯದ್ರಥನನ್ನು ಕೊಲ್ಲಬಯಸಿದ ತನ್ನ ಸ್ವಾಮಿಯಾದ ಶ್ರೀ ಕೃಷ್ಣನ ಸಂಕಲ್ಪವೇ ಮೈವೆತ್ತಂತಿರುವ, ಕೋಟಿಸೂರ್ಯರ ಕಾಂತಿಯಿಂದ ಬೆಳಗುವ, ತೇಜೋರಾಶಿಯಾದ ಶ್ರೀ ಸುದರ್ಶನ ಮೂರ್ತಿಗೆ ಮಂಗಳವು!

**ಅಂಬರೀಷ ವ್ರತದ್ರೋಹಿದುರ್ವಾಸಗರ್ವನಾಶಿನೇ |**
**ಸ್ವಭಕ್ತಪರತಂತ್ರಾಯ ಜ್ವಾಲಾಮಾಲಾಯ ಮಂಗಲಂ || ೨ ||**

ಮಹಾಭಾಗವತನಾದ ಅಂಬರೀಷನ ವ್ರತಕ್ಕೆ ಭಂಗಮಾಡಲು ಬಯಸಿದ ದೂರ್ವಾಸ ಮುನಿಗಳ ಗರ್ವವನ್ನು ಕಳೆದ, ಭಕ್ತಪರಾಧೀನನಾದ, "ಜ್ವಾಲಾಮಾಲೀಸುದರ್ಶನ" ಮೂರ್ತಿಗೆ ಮಂಗಳವು!

**ಶಂಬರಾಸುರಸಾಹಸ್ರ ಮಾಯಾಸೂದನಕಾರಿಣೇ |**
**ಬಾಲಪ್ರಹ್ಲಾದರಕ್ಷಾಯಾಂ ಜ್ವಾಲಾಮಾಲಾಯ ಮಂಗಲಂ || ೩ ||**

ಶಂಬರಾಸುರನ ಸಾವಿರಾರು ಮಾಯಾಕೃತ್ಯಗಳನ್ನು ನಾಶಮಾಡಿದ, ಬಾಲನಾದ ಪ್ರಹ್ಲಾದನನ್ನು ರಕ್ಷಿಸಲು ಬಂದ, "ಜ್ವಾಲಾಮಾಲಿ"ಗೆ ಮಂಗಳವು.

**ಬಾಣಬಾಹುಸ್ನುಹಿವನಚ್ಛಿದೇ ತೀಕ್ಷ್ಣೋಗ್ರನೇಮಯೇ |**
**ಕುತೋಽಪ್ಯಪ್ರತಿರುದ್ಧಾಯ ಹೇತಿರಾಜಾಯ ಮಂಗಳಂ || ೪ ||**

ಬಾಣಾಸುರನ ಸಾವಿರ ತೋಳುಗಳೆಂಬ ಕಳ್ಳಿ ಗಿಡಗಳ ಕಾಡನ್ನು ಕತ್ತರಿಸಿದ, ತೀಕ್ಷ್ಣವೂ ಉಗ್ರವೂ ಆದ ನೇಮಿ (  ) ಗಳಿಂದ ಕೂಡಿದ, ಯಾರಿಂದಲೂ ಯಾವಾಗಲೂ ತಡೆಯೆಂಬುದೇ ಇಲ್ಲದ "ಅಸ್ತ್ರರಾಜ"ನಿಗೆ ಮಂಗಳವು!

**ಉದ್ದಿಷ್ಟ ಸೇವಾವಿಘ್ನಾರ್ತ ಗಜೇಂದ್ರಸುಖಹೇತವೇ |**
**ವಿಧ್ವಸ್ತಪ್ರತಿಬನ್ಧಾಯ ಸಹಸ್ರಾರಾಯ ಮಂಗಲಂ || ೫ ||**

ಶ್ರೀಮನ್ನಾರಾಯಣನ ಪಾದಗಳಿಗೆ ಮಡುವಿನಲ್ಲಿ ಚೆನ್ನಾಗಿ ಅರಳಿದ್ದ ತಾವರೆ ಹೂವನ್ನು ಸಮರ್ಪಿಸಬೇಕೆಂದು ಬಯಸಿದ ಸೇವೆಗೆ ಅಡ್ಡಿಯೊದಗಿದುದರಿಂದ ಶೋಕಾರ್ತನಾದ **ಗಜೇಂದ್ರನ** ಮನದ ಅಳಲೂ ಆಸೆಯೂ ತೀರುವಂತೆ ಮಾಡಿ, ಅವನಿಗೆ ಆನಂದವನ್ನು ತಂದ, ಸರ್ವ ವಿಘ್ನಗಳನ್ನೂ ಪರಿಹರಿಸುವ, ಸಾವಿರಾರು ಅರಗಳಿಂದ ಶೋಭಿಸುವ ಸುದರ್ಶನ ಮೂರ್ತಿಗೆ ಮಂಗಳವು!

**ವಿಚ್ಛೇತ್ರೇ ಮೌರಪಾಶಾನಾಂ ವಿಭೇತ್ರೇ ನರಕಾಸುರಂ |**
**ಸ್ವಾಮಿಕೈಂಕರ್ಯಧುರ್ಯಾಯ ವಜ್ರನಾಭಾಯ ಮಂಗಲಂ || ೬ ||**

"ಮುರಾ" ಎಂಬ ಬಳ್ಳಿಯ ಪಾಶಗಳನ್ನು ಕತ್ತರಿಸಿದ, ನರಕಾಸುರನನ್ನು ಭೇದಿಸಿದ, ಸ್ವಾಮಿಸೇವಾನಿಷ್ಠನಾದ ರಣಧೀರನಿಗೆ ಮಂಗಳವು!

**ಆಹರ್ತುರ್ವೈದಿಕಸುತಾನ್ ತಮೋಭೂಮೌಸ್ಖಲದ್ಗತೇಃ |**
**ಮಾರ್ಗಪ್ರದರ್ಶನೇ ವಿಷ್ಣೋಃ ಭೂಯಾತ್ ದಕ್ಷಾಯ ಮಂಗಲಂ ||೭||**

ವೈದಿಕಪುತ್ರರನ್ನು ಕರೆದುಕೊಂಡು ಬರಲು ಹೊರಟ ವಿಷ್ಣುವಿಗೆ ಪ್ರಕೃತಿಮಂಡಲದ ಗಡಿಯಲ್ಲಿ ಎಡವದಂತೆ ದಾರಿಯನ್ನು ತೋರಿಸಿದ ಸ್ವಕಾರ್ಯದಕ್ಷನಾದ ಶ್ರೀ ಸುದರ್ಶನನಿಗೆ ಮಂಗಲವು!

**ಸೃಷ್ಟಿಪಾಲನ ಸಂಹಾರ ಕ್ರಿಯಾಧುರ್ಯಾಯ ಶಾರ್ಙ್ಗಿಣಃ |**
**ಭೋಗೈಕಹೇತವೇ ಭರ್ತುಃ ಮಂಗಲಂ ತೇ ಸುದರ್ಶನ || ೮ ||**

ಶಾರ್ಙ್ಗಪಾಣಿಯಾದ ಮಹಾವಿಷ್ಣುವಿನ ಕರ್ತವ್ಯಗಳಾದ ಜಗತ್ಸೃಷ್ಟಿ ಸಂರಕ್ಷಣ ಮತ್ತು ಪ್ರಳಯಗಳ ಭಾರವನ್ನು ಹೊತ್ತುಕೊಂಡು ತನ್ನ ಸ್ವಾಮಿಯ ಭೋಗವಾದ ಆಶ್ರಿತರ ಸಂಶ್ಲೇಷಕ್ಕೆ ಅವಕಾಶವೀಯುವ ಕಾರಣವಾಗಿರುವ ಸುದರ್ಶನಮೂರ್ತಿಯೇ, ನಿನಗೆ ಮಂಗಳವು!

**ಮಾಲಿಪ್ರಹರಣಾಘಾತ ಪರಾಙ್ಮುಖಗರುತ್ಮತಾ |**
**ಅಪೋಢಸ್ಯ ಹರೇರ್ಯುದ್ಧೇ ಮಾನದಾಯಾಸ್ತು ಮಂಗಲಂ || ೯ ||**

ಶ್ರೀ ರಾಮಾಯಣ ಕಾಲದಲ್ಲಿ 'ಮಾಲಿ'ಯ ಶಸ್ತ್ರಗಳ ಪೆಟ್ಟಿಗೆ ನೊಂದು ಗರುಡನು ಹಿಂತಿರುಗಿದನು. ಆಗ ಯುದ್ಧ ಮಾಡುತ್ತಿದ್ದ

ಶ್ರೀಹರಿ (ರಾಮ) ಗೆ ತನ್ನ ಸೇವೆಯನ್ನು ಸಲ್ಲಿಸಿ ಮಾನವನ್ನು ತಂದ ಸುದರ್ಶನ ಮೂರ್ತಿಗೆ ಮಂಗಲವು !

ಸ್ವಾಮಿನಿಂದಾಸಮಾಸಕ್ತಶಿಶುಪಾಲಶಿರಚ್ಛಿದೇ |
ಸಿದ್ಧಾಯ ಸ್ಮೃತಿಮಾತ್ರೇಣ ಮಂಗಲಂ ಕ್ಷಿಪ್ರಕಾರಿಣೇ || ೧೦ ||

ತನ್ನ ಒಡೆಯನಾದ ಶ್ರೀಕೃಷ್ಣನನ್ನು ನಿಂದಿಸುವುದರಲ್ಲಿ ಅತ್ಯಾಸಕ್ತಿಯುಳ್ಳ ಶಿಶುಪಾಲನ ತಲೆಯನ್ನು ಕತ್ತರಿಸಿದ ಚಕ್ರರಾಜನಿಗೆ, ನೆನೆದೊಡನೇ ಬಂದು ಬೇಗ ಬಯಸಿದ ಕಾರ್ಯವನ್ನು ಮಾಡಬಲ್ಲ, ಸದಾಸಿದ್ಧನಾಗಿರುವವ (ಸಿದ್ಧ) ನಿಗೆ ಮಂಗಳವು !

ಕಾಶೀರಾಜಸಮಾಯುಕ್ತ ಕೃತ್ಯಾವಿಲಯ ಕರ್ಮಣೇ |
ಕಾಶೀನಗರದಗ್ಧ್ರೇಚ ವೈಷ್ಣವಾಗ್ರ್ಯಾಯ ಮಂಗಳಂ || ೧೧ ||

ಕಾಶೀರಾಜನು ಮಾಡಿಸಿದ ಅಭಿಚಾರ ಕೃತ್ಯಗಳನ್ನೆಲ್ಲ ನಾಶಮಾಡಿ, ಕಾಶೀನಗರವನ್ನು ಸುಟ್ಟು ತಾನು ವಿಷ್ಣುಭಕ್ತಾಗ್ರಗಣ್ಯನೆಂದು ತೋರಿಸಿದಚಕ್ರ ರಾಜನಿಗೆ ಮಂಗಳವಾಗಲಿ !

ಸೌಭಂಚ ತತ್ಪತಿಂ ಸಾಳ್ವಂ ದಾರುಕ್ರಕಚವತ್ ದ್ವಿಧಾ |
ಮಧ್ಯೇ ಬಿಭೇದ ಯಸ್ತಸ್ಮೈ ಮಂಗಲಂ ದಹನಾತ್ಮನೇ || ೧೨ ||

ಆಕಾಶದಲ್ಲಿ ಸಂಚರಿಸುತ್ತಿದ್ದ "ಸೌಭ" ನಗರವನ್ನೂ ಅದರ ಅರಸನಾದ ಸಾಳ್ವನನ್ನೂ ಗರಗಸ ಮರವನ್ನು ಸೀಳುವಂತೆ, ಸೀಳಿದ "ಅಗ್ನ್ಯಾತ್ಮ" ನಿಗೆ ಮಂಗಳವಾಗಲಿ !

ದ್ರೋಹಿ ದ್ರೌಣಿ ಪ್ರಾರ್ಥಿತೇನ ದತ್ತಮಪ್ಯಚ್ಯುತೇನ ಯಂ |
ಪರಿಗ್ರಹೀತುಂ ನಾಶಕ್ನೋತ್ ಪರಾಧೃಷ್ಯಾಯ ಮಂಗಲಂ || ೧೩ ||

ಶ್ರೀಕೃಷ್ಣನಿಗೆ ದ್ರೋಹವನ್ನು ಬಯಸಿದ, ದ್ರೋಣಾಚಾರ್ಯರ ಪುತ್ರರಾದ, ಅಶ್ವತ್ಥಾಮಾಚಾರ್ಯರು ಪ್ರಾರ್ಥಿಸಿದಂತೆ ಶ್ರೀಕೃಷ್ಣನು ಅವರಿಗೆ ಚಕ್ರವನ್ನು ಕೊಟ್ಟರೂ ಅದನ್ನು ಅವರಿಗೆ ತೆಗೆದುಕೊಳ್ಳಲಾಗಲಿಲ್ಲ, ಈ ವೃತ್ತಾಂತದಿಂದ ತಾನು "ಪರಾಧೃಷ್ಯ" (ಇತರರಿಗೆ ಅಧೀನವಲ್ಲ, ಅಡಗುವುದಿಲ್ಲ) ವೆಂಬುದನ್ನು ಸಮರ್ಥಿಸಿದ ಚಕ್ರರಾಜನಿಗೆ ಮಂಗಳವು !

ದ್ರೌಣಿ ಬ್ರಹ್ಮಾಸ್ತ್ರ ನಿರ್ದಾಹ ಪ್ರಾಪ್ತಮೃತ್ಯುತ್ತರಾಸುತಂ ।
ಯೋಽಜೀವಯತ್ ಪುನಸ್ತಸ್ಮೈ ಸರ್ವಶಕ್ತಾಯ ಮಂಗಲಂ ॥೧೪॥

ಅಶ್ವತ್ಥಾಮಾಚಾರ್ಯರು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಸುಟ್ಟು ಹೋಗಿ, ಹುಟ್ಟುವಾಗಲೇ ಸತ್ತುಹೋಗಿದ್ದ, ಉತ್ತರೆಯ ಮಗನನ್ನು ಮತ್ತೆ ಬದುಕಿಸಿದ ಸರ್ವಶಕ್ತನಾದ ಸುದರ್ಶನನಿಗೆ ಮಂಗಲವಾಗಲಿ !

ಸ್ಥಾಪಯಿತ್ರೇ ಪರತ್ವಸ್ಯ ವಿಷ್ಣೋ ಸ್ವವಹನಾತ್ ಪ್ರಭೋ ।
ಅನನ್ಯಸಾಧನಾಯಾಸ್ತು ಶಸ್ತ್ರರಾಜಾಯ ಮಂಗಲಂ ॥ ೧೫ ॥

ಮಹಾ ವಿಷ್ಣುವಿಗೆ ಶ್ರೀದೇವಿ ಪತ್ನಿ, ಅನಂತ ಹಾಸಿಗೆ, ಗರುಡನೇ ಧ್ವಜ, ಸುದರ್ಶನ ಪ್ರಧಾನಶಸ್ತ್ರ (ಆಯುಧ) ತುಲಸೀ ವನಮಾಲೆಗಳು ಲಕ್ಷಣಗಳು : ಅವನು ಪುರುಷೋತ್ತಮ, ಸರ್ವೇಶ್ವರ, "ಆರ್ತತ್ರಾಣ ಪರಾಯಣ," "ಆಶ್ರಿತರ ವಿಶ್ಲೇಷಾಸಹಿಷ್ಣು," "ಜಗದ್ರಕ್ಷಣದೀಕ್ಷಿತ" ಎಂದು ತೋರಿಸುವ ಅನಿತರ ಸಾಧಾರಣವಾದ ಗುರುತುಗಳು. ಚಕ್ರಾಯುಧವನ್ನು ಧರಿಸುವುದು ಪರತ್ವದ ಚಿಹ್ನೆ ಎಂದು ಶಿಷ್ಟಜನಾಭಿಪ್ರಾಯ, ತನ್ನನ್ನು ಧರಿಸುವುದರಿಂದಲೇ "ಪ್ರಭುವಾದ ವಿಷ್ಣುವೇ ಪರತತ್ವ" ಎಂಬುದನ್ನು ಸ್ಥಾಪಿಸುತ್ತಿರುವ, ಇದಕ್ಕೆ ಮತ್ತೊಂದು ಸಾಧನವನ್ನು ಅಪೇಕ್ಷಿಸದ, ಶಸ್ತ್ರರಾಜನಾದ ಸುದರ್ಶನನಿಗೆ ಮಂಗಲವಾಗಲಿ !

ಸ್ವೋಪಾಸಕ ಪರಾಧೀನ ನಿಖಿಲಾತ್ಮಕ್ರಿಯಾಜುಷೇ ।
ಅತೀವೇಲದಯಾದ್ರಾಯ ಚಕ್ರರಾಜಾಯ ಮಂಗಲಂ ॥ ೧೬ ॥

ತನ್ನ ಉಪಾಸಕ (ಭಕ್ತ) ರಿಗೆ ಪರತಂತ್ರನಾಗಿದ್ದುಕೊಂಡು ಅವರಿಂದ ಅವರಿಗೆ ಅನುಕೂಲವಾದಾಗ ತನ್ನ ಸೇವೆಗಳನ್ನೆಲ್ಲ ಕೈಗೊಳ್ಳುವ ಪರಮ ಕೃಪಾಳುವಾದ ಚಕ್ರರಾಜನಾದ ಸುದರ್ಶನನಿಗೆ ಮಂಗಲವಾಗಲಿ !

## ನಿಗಮನಂ

ಬಾಲಧನ್ವಿಕುಲೋದ್ಭೂತ ಶಿಂಗರಾರ್ಯತನೂಭುವಾ ।
ಯಧ್ವದ್ರಿನಿತ್ಯವಾಸೇನ ವೇಂಕಟಾರ್ಯಾಖ್ಯಸೂರಿಣಾ ॥
ತತ್ತತ್ ಪುರಾಣಸ್ಥಕಥಾಸಂಗ್ರಹಪ್ರತಿಪಾದಕಂ ।
ಮಂಗಲಂ ಚಕ್ರರಾಜಸ್ಯ ಭೂಯಾತ್ ಪಾದಯುಗೇಽರ್ಪಿತಂ ॥

ಇತಿ ಶ್ರೀ ಯದುಗಿರಿ ವಾಧೂಲ ಮಹಾರ್ಯ ಪೌತ್ರ ಶ್ರೀ ನಾರಾಯಣ ಗುರು ಚರಣಾಂಬುಜ ಷಟ್‌ಚರಣಸ್ಯ "ಐಂಬತ್ತಿರುವರ್" ಸ್ಥಾನೀಕಂ "ಕುಪ್ಪಣ್ಣಾ" ('ಪಂಡಿತರತ್ನಂ' ಶ್ರೀನಿವಾಸ ನರಸಿಂಹಾಚಾರ್ಯ) ಸ್ವಾಮಿನಾಂ ಪ್ರಸಾದಾಸಾದಿತ ಸಾಹಿತ್ಯಾಲಂಕಾರ ಸಾಂಖ್ಯಯೋಗ ವಿಶಿಷ್ಟಾದ್ವೈತವೇದಾನ್ತ ದ್ರಾವಿಡ ವೇದಾನ್ತ ವೈದುಷ್ಯಸ್ಯ ಸಾಂಖ್ಯತೀರ್ಥಂ 'ಸಾಹಿತ್ಯರತ್ನಂ' ಜಗ್ಗೂ ವೇಂಕಟಾಚಾರ್ಯಸ್ಯ ಕೃತಿಷು ಶ್ರೀ ಸುದರ್ಶನ ಮಂಗಲಂ ॥ ಶ್ರೀಃ ॥

ಶ್ರೀರಾಮಾನುಜಾಚಾರ್ಯರ ಶಿಷ್ಯಮಂಡಲಿಗೆ ಸೇರಿದ "ಬಾಲಧನ್ವಿ" ವಂಶದಲ್ಲಿ ಅವತರಿಸಿದ ಹಯಗ್ರೀವೋಪಾಸಕರಾದ ಶ್ರೀ ಜಗ್ಗೂ ಶಿಂಗರೈಯ್ಯಂಗಾರ್ ಎಂಬ ಸಾಹಿತಿ-ಕವಿಗಳ ಸುಪುತ್ರರಾದ ಯದ್ವದ್ರಿವಾಸರಸಿಕರಾದ ವೆಂಕಟಾಚಾರ್ಯರೆಂಬ ವಿದ್ವಾಂಸರು ನಾನಾ ಪುರಾಣಗಳಲ್ಲಿ ಬರುವ ಚಕ್ರರಾಜನ ಕಥೆಗಳನ್ನೆಲ್ಲಾ ಸಂಗ್ರಹಿಸಿ ಹಾಡಿರುವ ಈ **'ಶ್ರೀ ಸುದರ್ಶನ ಮಂಗಲಂ'** ಎಂಬ ಕೃತಿಯು ಶ್ರೀ ಸುದರ್ಶನ ಸೂರಿಯ ಪಾದಾರವಿಂದಗಳಲ್ಲಿ ಸಮರ್ಪಿತವಾಗಲಿ !

---

ಶ್ರೀಮತೇ ರಾಮಾನುಜಾಯ ನಮಃ

# ಅನುಬಂಧ

## ೧. ಶ್ರೀ ಗುರುಸ್ತವಃ

ಶ್ರೀ ಯಾದವಾದ್ರೀಶ-ಪದಾನು-ರಕ್ತೋ
ರಾಮಾನುಜಾಚಾರ್ಯ ಕೃತಿಷ್ವಭಿಜ್ಞಃ ।
ಶಠಾರಿ ಸೂಕ್ತ್ಯರ್ಥ ರಹಸ್ಯನಿಷ್ಠ
ಸಾಹಿತ್ಯ-ವೇದಾನ್ತ-ಕಲಾ ವಿದಗ್ಧಃ ॥ ೧ ॥

ಸಾಂಖ್ಯೇ ಚ ಯೋಗೇ ವಿದಿತ-ಪ್ರಭಾವೇ
ಶ್ರೀಮನ್ತ್ರಶಾಸ್ತ್ರೇ ಚ ಪುರಾಣಬೃನ್ದೇ ।
ನಿವೇಶಿತಾತ್ಮಾ ಗುರುಪಾದಪದ್ಮೇ
ಕರ್ಣಾಟಭಾಷಾ–ದ್ರವಿಡಾಗಮಜ್ಞಃ ॥ ೨ ॥

ಪಾಂಡಿತ್ಯ ಗಾಂಭೀರ್ಯ ಕವಿತ್ವಜುಷ್ಟಃ
ಸಾಹಿತ್ಯಮೀಮಾಂಸನ-ಲಬ್ಧಕೀರ್ತಿಃ ।
ರಾಮಾನುಜಾರ್ಯೇ ಚ ತದೀಯ ಸಂಘೇ
ವಿಶೇಷ ವಿಶ್ವಾಸ ಕೃತಾನುರಾಗಃ ॥ ೩ ॥

ಶ್ರೀಮದ್ಯತೀನ್ದ್ರ ಪ್ರವಣ ಪ್ರಭಾವೋ
ಗೀರ್ವಾಣವಾಣ್ಯಾಂ ವಿಶದೀಕೃತೋಽಭೂತ್ ।
ಧನ್ಯಾತ್ಮನಾ ಯೇನ ಮಹಾನುಭಾವಂ
ತಂ ವೇಂಕಟಾರ್ಯಂ ಶಿರಸಾ ನಮಾಮಿ ॥ ೪ ॥

ವೇದಾನ್ತದ್ವಯಸಾರಜ್ಞಂ ಜಗ್ಗೂ ವೇಂಕಟದೇಶಿಕಂ ।
ಬಾಲಧನ್ವಿ ಕುಲಾಬ್ಧೀಂದುಂ ವಂದೇಽಹಂ ಸಜ್ಜನಪ್ರಿಯಂ
॥ ೫ ॥

## ೨. ಶ್ರೀ ಗುರುಸ್ಮೃತಿಸನ್ತತಿಃ

ಶ್ರೀಮದ್ಯಾದವ ಶೈಲನಾಥ-ಯತಿರಾಟ್-ತದ್ಭಕ್ತ ಸೇವಾರತಃ
ಶ್ರೀಮತ್ ಕೌಶಿಕವಂಶನಾಯಕಮಣಿಃ ಶ್ರೀ ಶಿಂಗರಾಯಾರ್ಯಾತ್ಮಜಃ ।

ಶಾರ್ವರ್ಯಬ್ದಗಕರ್ಕಟೇ ಶಿತಿದಳೇಽಷ್ಟಮ್ಯಾಂ ರವೇರ್ವಾಸರೇ
ಶ್ರೀ ವೈಕುಂಠಮಕುಂಠವೈಭವಮಗಾತ್ ಶ್ರೀ ವೇಂಕಟಾರ್ಯಸ್ಸುಧೀಃ

o o o o

ಶ್ರೀಮುಖೇಮಕರಾಶ್ರೇಷಾಜಾತಃ ಶ್ರೀ ಶಿಂಗರಾತ್ಮಜಃ |
'ಶ್ರೀ ಮಹಾನ್ನಾದಿ' (೭೭) ಸಂಖ್ಯಾಬ್ದಾನುಷಿತ್ವಾಯದುಭೂಧರೇ ॥ ೧ ॥

'ವೇದವೇದಾನ್ತಬೋಧಿನ್ಯಾಂ' ಪಪಾಠಾಽಪಾಠಯಚ್ಚ ಯಃ |
ವೇದಾನ್ತದ್ವಯಮರ್ಮಜ್ಞಃ ಕಾವ್ಯಶಾಸ್ತ್ರಾರ್ಥ ತತ್ತ್ವವಿತ್ ॥ ೨ ॥

ಇತಿಹಾಸಪುರಾಣಾನಾಂ ತಾತ್ಪರ್ಯಂ ವ್ಯವೃಣೋನ್ಮುದಾ |
ಯದುಶೈಲಸ್ಯನೇತ್ರೀಯಾ ಭುಕ್ತಿ ಮುಕ್ತಿಪ್ರದಾಯಿನೀ ॥ ೩ ॥

ದೇವಸ್ಯ ಚಕ್ರರಾಜಸ್ಯ ಸನ್ನಿಧೌ ನೃಹರೇಸ್ತಥಾ |
ಯದ್ವದ್ರಿ ಯತಿರಾಜಸ್ಯ ತತ್ಸುತಸ್ಯ ಹರೇಃ ಪ್ರಭೋಃ ॥ ೪ ॥

ಸ್ತೋತ್ರಪಾಠಂ ತಥಾಗಾನಂ ರಸಾರ್ದ್ರಮಧುರಪ್ರಿಯಂ |
ಚಕ್ರೇಽಚಾತೋ ಪಾಯದ್ದೇವಂ ಸೂರೀನ್ ಭಾಗವತಾನ್ ಜನಾನ್ ॥ ೫ ॥

o o o

ಶಾರ್ವರೌ ಕರ್ಕಟೇ ಕೃಷ್ಣೇ ರಾತ್ರ್ಯಾಂಚಾದಿತ್ಯವಾಸರೇ
ಶ್ರೀಮದ್ಯಾದವಶೈಲಾಗ್ರೇ ಚಾಷ್ಟಮ್ಯಾಂ ಕೃತ್ತಿಕಾಯುತೇ ॥
ಸಾಂಖ್ಯತೀರ್ಥಂ ವೇಂಕಟಾರ್ಯಂ ಶಿಂಗರಾರ್ಯಗುರೋಸ್ಸುತಃ |
ಶಾಸ್ತ್ರವಿಶ್ವಾಸಶಾಲೀ ಚ ಪ್ರಾಪ ವಿಷ್ಣೋಃ ಪದಂ ಶುಭಂ ॥

o o o

ಚರಾಚರಗುರೋರ್ವಿಷ್ಣೋಃ ಶ್ರೀಪತೇಃ ಕರುಣಾರ್ಥಿನಾಂ |
ಭಕ್ತಾನಾಂ ಕವಿರತ್ನಾನಾಂ ಕೃತೀನಾಮನುವಾದನೇ |
ಬದ್ಧಾದರೇಣ ಶಿಷ್ಯೇಣ ರಚಿತಾ ಸ್ಮೃತಿಸನ್ತತಿಃ |
ಅರ್ಪಿತಾಗುರುಪಾದಾಬ್ಜೇ ಪ್ರೀತಯೇಽಸ್ತು ಸದಾ ಸತಾಂ ॥
ಆಶಾಸನಮಿದಂ ಹಾರ್ದಂ ಭೂವಿಜ್ಞಾನವಿಪಶ್ಚಿತಃ
ಶ್ರೀಶಾನುದಾಸಶಿಷ್ಯಸ್ಯ ಶ್ರೀನಿವಾಸಾಖ್ಯಶರ್ಮಣಃ ॥

ರಾಮಾನುಜ ಮುನಿಶ್ಚಿತ್ತೇ ವಾಜಿವಕ್ತ್ರಶ್ಚ ವಾಚಿ ಮೇ ।
ವಾತ್ಸಲ್ಯಂ ಕರೋತು ವಾತ್ಸಲ್ಯಾದ್ಯೇನ ವಾಣೀ ವಶಂಭವೇತ್ ॥



ಶ್ರೀ ಉ. ವೇ. ದಿವಂಗತ ಸಾಹಿತ್ಯರತ್ನಂ ಜಗ್ಗೂ ವೆಂಕಟಾಚಾರ್ಯರು

## ಕೆಲವು ಅಭಿಪ್ರಾಯಗಳು

(1) "ತಿರುಪ್ಪಾವೈ"—"ಉತ್ತಮರೀತಿಯ ಕಾವ್ಯ" ಭಕ್ತಿ ಪ್ರತಿಪಾದಕ ಅತ್ಯುತ್ತಮ ಗ್ರಂಥ". —ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು,

(2) "ಶ್ರೀ ಗೋದಾದೇವಿಯ ನಾಯಕೀ ಗೀತೆ"—ತಮಿಳು ಮೂಲ ಅನುವಾದ ಮತ್ತು ವಿಶೇಷಾರ್ಥ ಸಹಿತ ರೂ ೧-೫೦.

This work may be looked upon as typical of what sometimes is called Bridal Mysticism. The inner meaning of this mysticism is brought out by the author of this translation following the, traditional love pertaining to such interpretation termed Swapadesartha. The Prose Translation of the Verses is skilfully done. The author deserves to be congratulated on this difficult enterprise.' —*The Hindu*.

(3) "ತಿರುವಾಶಿರಿಯಂ"—ಯಜುರ್ವೇದ ಸಾರ ಮತ್ತು ವ್ಯಾಖ್ಯಾನ ನಮ್ಮಾಳ್ವಾರರ ಮತ್ತು ಅವರ ಕೃತಿಗಳ ಪರಿಚಯದೊಡನೆ. ರೂ ೦-೩೮.

(4) ನಿತ್ಯಾನುಸಂಧಾನಂ : "ಶ್ರೀವೈಷ್ಣವ ಸಂಪ್ರದಾಯದ ಮೇರೆಗೆ ಪ್ರತಿನಿತ್ಯವೂ ದೇವರ ಪೂಜೆಯ ಕಾಲದಲ್ಲಿ ಅನುಸಂಧಾನ ಮಾಡತಕ್ಕ ತಮಿಳು ನಾಡಿನ ಹರಿದಾಸರ ಈ ಗೀತೆಗಳನ್ನು ಕನ್ನಡಲಿಪಿಯಲ್ಲಿಯೂ ಭಾಷಾಂತರದಲ್ಲಿಯೂ ಮೂಲದೊಡನೆ ಅನುವಾದಕರು ಕೊಟ್ಟು ಕಲಿಯಲಿಕ್ಕೂ ಅರ್ಥ ತಿಳಿಯಲಿಕ್ಕೂ ನೆರವು ನೀಡಿದ್ದಾರೆ. ಭಾಗವತ ಸಾಹಿತ್ಯಕ್ಕೆ ಹೆಸರುವಾಸಿಯಾದ ಈ ತಮಿಳು ಭಕ್ತಿ ಗೀತೆಗಳನ್ನು ಸುಶ್ರಾವ್ಯವಾಗಿ ಹಾಡಲು ಅನುಕೂಲಿಸುವಂತೆ ರಾಗ ತಾಳಗಳನ್ನೂ ಕೊಟ್ಟಿದ್ದಾರೆ." —ವಿಶ್ವಕರ್ನಾಟಕ.

**ಬಿಡಿ ಮುತ್ತು** : ಶ್ರೀ ಸಾಹಿತ್ಯ ರತ್ನಂ ಜಗ್ಗೂ ವೇಂಕಟಾಚಾರ್ಯರ ಭಾರತ ಕೃಷ್ಣ ಮಂಗಳಂ ೦-೧೯.

—: ಪ್ರತಿಗಳು ಸಿಕ್ಕುವ ಸ್ಥಳ :—

| | |
|---|---|
| ಅ. ನ. ಶ್ರೀನಿವಾಸಯ್ಯಂಗಾರ್. B.Sc. (Hons.) | ಅಯ್ಯಂಗಾರ್ ನರಸಿಹ್ಮಾಚಾರ್ಯ, |
| ಗೌರವ ಸಂಪಾದಕ | ವ್ಯವಸ್ಥಾಪಕರು |
| ಲಕ್ಷ್ಮೀ ನಿಲಾಸ 2 - 1 - 454 | ಶ್ರೀ ಮೊದ್ಲಾಚಾರ್ಯರ ಬೀದಿ |
| ನಲ್ಲಕುಂಟಾ P.O. | P.O. ಮೇಲುಕೋಟೆ |
| ಹೈದರಾಬಾದ್-20 (ದಕ್ಷಿಣ) | ಮಂಡ್ಯ ಜಿಲ್ಲೆ |